# ಅಭಿನಯಗೀತ ಮಂಜರಿ

ಜಿ. ಎನ್. ಲಕ್ಷ್ಮಣ ಪೈ



ಲಸಾಹಿತ್ಯ ಮಂಡಲ (ಪ್ರೈವೇಟ್) ಲಿಮಿಟೆಡ್, ಮಂಗಳೂರು

# ABHINAYAGEETA--MANJARI

(A BOOK OF NURSERY RHYMES & ACTION SONGS)

**FOR USE IN SCHOOLS**

*By*

G. N. LAKSHMAN PAI, VIDVAN. P.O. L.

(Author of "Padyaratnavali", "Abhinaya-Geetavali"
& "Sisugeeta- Male" etc.)

[*Written according to the syllabus issued by the Madras Government*]

SECOND EDITION

# ಅಭಿನಯಗೀತಮಂಜರಿ

(ಶಿಶುಗೀತಗಳೂ ಅಭಿನಯಗೀತಗಳೂ)

ಪಾಠಶಾಲೆಗಳ ಉಪಯೋಗಾರ್ಥವಾಗಿ

"ಪದ್ಯರತ್ನಾವಳಿ" "ಅಭಿನಯಗೀತಾವಳಿ" "ಶಿಶುಗೀತಮಾಲೆ"
ಇತ್ಯಾದಿ ಪುಸ್ತಕಗಳ ರಚಕರಾದ

ಜಿ. ಎನ್. ಲಕ್ಷ್ಮಣ ಪೈ, ವಿದ್ವಾನ್, ಪಿ. ಒ. ಎಲ್.
ಇವರಿಂದ ರಚಿತವಾದುದು

(ಎರಡನೆಯ ಆವೃತ್ತಿ)

[ಮದರಾಸು ಸರಕಾರದವರು ಹೊರಡಿಸಿದ ಪಾಠಪಟ್ಟಿಗೆ ಅನುಗುಣವಾಗಿ ರಚಿತವಾಗಿದೆ.]

PUBLISHERS:

**BALASAHITYA MANDALA, (PRIVATE) LIMITED,**

MANGALORE - 3.



೧೯೫೭

Price: 4 As.] [ಕ್ರಯ: ೪ ಆಣೆ

*Approved by the*
*Madras Text-Book Committee For Class-Use*
*(Detailed Study)*
*[Vide: Page 2 of the Suppliment to the*
*Fort St. George Gazette Dated 20-7-1955]*

PRINTED AT THE DHARMA PRAKASH PRESS, MANGALORE

# ಮುನ್ನುಡಿ

ಸುಮಾರು ೩೨ ವರ್ಷಗಳ ಹಿಂದೆ ನಾನು ಇನ್ನೂ ಹಾಯ್‌ಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ನನ್ನಿಂದ ರಚಿತವಾದ ಬಾಲಗೀತಗಳು ಆ ವರ್ಷದಲ್ಲೇ (ಅಂದರೆ ೧೯೨೧ ರಲ್ಲಿ) "ಪದ್ಯರತ್ನಾವಳಿ" ಎಂಬ ಅಭಿಧಾನದಿಂದ ಪುಸ್ತಕ ರೂಪದಲ್ಲಿ ಪ್ರಕಟಗೊಂಡುವು. ತದನಂತರ ನಾನು ಬರೆದ ಶಿಶುಗೀತಗಳೂ ಅಭಿನಯಗೀತಗಳೂ ಕ್ರಮಶಃ ೧೯೩೩ರಲ್ಲಿ "ಅಭಿನಯಗೀತಾವಳಿ" ಎಂಬ ಹೆಸರಿನಿಂದಲೂ, ೧೯೪೯ರಲ್ಲಿ "ಶಿಶುಗೀತಮಾಲೆ" ಎಂಬ ಹೆಸರಿನಿಂದಲೂ ಪುಸ್ತಕ ರೂಪದಲ್ಲಿ ಬೆಳಕನ್ನು ಕಂಡವು. ಮಕ್ಕಳ ಪದ್ಯಸಾಹಿತ್ಯ ನಿರ್ಮಾಣ ಕಾರ್ಯದಲ್ಲಿ ಇದೀಗ ನನ್ನ ನಾಲ್ಕನೆಯ ಕೃತಿ. ಭಾಷಾದೃಷ್ಟಿಯಿಂದಲೂ ವಿಷಯ ವೈವಿಧ್ಯದೃಷ್ಟಿಯಿಂದಲೂ ಪುಸ್ತಕವು ಎಳೆಯವರಿಗೆ ಆಕರ್ಷಕವಾಗುವಂತೆ ಪ್ರಯತ್ನಿಸಿದ್ದೇನೆ. ಈ ಗೀತಮಂಜರಿಯ ಸೌಂದರ್ಯಸೌರಭಗಳಿಂದಾಗಿ ನಮ್ಮ ನಾಡಿನ ಕಂದರು ಸ್ವಲ್ಪವಾದರೂ ಸಂತೋಷವನ್ನು ಅನುಭವಿಸಿದರೆ ನನ್ನ ಪ್ರಯತ್ನವು ಸಫಲವೆಂದೆ ಭಾವಿಸುತ್ತೇನೆ.

ವಿದ್ಯಾ ಇಲಾಖೆಯವರೂ, ಇತರರೂ ನನ್ನ ಹಿಂದಣ ಕೃತಿಗಳಿಗೆ ಸಾದರದ ಸ್ವಾಗತವಿತ್ತು ನನ್ನನ್ನು ಬಹಳವಾಗಿ ಪ್ರೋತ್ಸಾಹಿಸಿದ್ದಾರೆ. ಎನ್ನ ಲಾಗಿ ಈಗಲಾದರೂ ಈ ನವೀನ ಕೃತಿಯ ಸಂಬಂಧದಲ್ಲಿ ನಾನು ಅವರೆಲ್ಲರಿಂದ ಅಂತಹ ಪ್ರೋತ್ಸಾಹವನ್ನೆ ನಿರೀಕ್ಷಿಸಬಹುದಲ್ಲವೆ?

ಪುತ್ತೂರು,
ತಾ. ೩೦-೧೦-೧೯೫೩.

ಜಿ. ಎನ್. ಲಕ್ಷ್ಮಣ ಪೈ



# ಅನುಕ್ರಮಣಿಕೆ.

# ಅಭಿನಯಸಂಗೀತಮಂಜರಿ

## ೧. ಪ್ರಾರ್ಥನೆ

ರಾಗ: ಖಮಾಜ್‌ದುರ್ಗಾ — ರೂಪಕತಾಳ

ಧಾಟಿ: (ನನ್ನ ಹರಣ ನಿನಗೆ ಶರಣ)

ದೇವದೇವ! ನಿನ್ನ ಭಾವ
ವೆಮ್ಮ ಕಾವುದಾಗಲಿ || ಪಲ್ಲ ||

ಸಾವುನೋವು ಕಳೆದು ನಮ್ಮ
ಜೀವನವಿದು ಸಾಗಲಿ || ಅ.ಪ. ||

ಕಲಿವ ವಿದ್ಯೆಯಿಂದ ನಮಗೆ
ಸತ್ಯಮಾರ್ಗ ಬೆಳಗಲಿ
ಒಲಿದ ನಿನ್ನ ಕರುಣೆ ನಮ್ಮ
ಭರಣವನ್ನು ಮಾಡಲಿ || ೧ ||

ನಮ್ಮ ಭರತರಾಷ್ಟ್ರದಲ್ಲಿ
ನಿತ್ಯ ಶಾಂತಿ ನೆಲಸಲಿ
ನೆಮ್ಮದಿಯು ಸಮಸ್ತರಾಷ್ಟ್ರ
ಗಳಲಿ ಬಿಡದೆ ಫಲಿಸಲಿ || ೨ ||

# ೧. ಬೆಕ್ಕು



(ಲಾವಣಿ ಮಟ್ಟು – ಧಾಟಿ: ಬೆಕ್ಕಿನ ಕೊಂದವರ್‍ಯಾರಮ್ಮ)

ಬೆಕ್ಕನು ನೋಡಿದಿರೇನಮ್ಮ
ಬೆಕ್ಕನು ನೋಡಿದಿರೇನೆ || ಪಲ್ಲ ||

ಅತ್ತ ಇತ್ತ ಓಡುವ ಬೆಕ್ಕು
ಸುತ್ತಮುತ್ತ ತಿರುಗುವ ಬೆಕ್ಕು
ಇಲಿಯ ಹಿಡಿದು ತಿನ್ನುವ ಬೆಕ್ಕು || ೧ ||

ಭಳಿರೆ ಭಳಿರೆ «ಲಚ್ಚಣ ಪುಚ್ಚೆ"
ಹಾಲ ಮೊಸರ ಕೊಡುವುದು ಹೆಚ್ಚೆ?
"ಬಿಲ್ಲಿ ಮಾಮು"ಗೆ– ಮತ್ತೇನಿಚ್ಚೆ? || ೨ ||

# ೩. ಕಂದನ ಆಟ



ಚೆಂಡನ್ನಾಡಲು ಬಂದ ಸದಾಶಿವ
ಕೈಯಲಿ ಬ್ಯಾಟನು ಹಿಡಿದಾಡಿ
ಚೆಂಡನು ದೂರಕೆ ಎಸೆಯುತಲೆಂದನು
"ಸುಂದಕ್ಕನೆ ತಾ ಆದನೋಡಿ" ॥ ೧ ॥

ಕಿತ್ತಳೆಹಣ್ಣನು ತಿಂದ ಸದಾಶಿವ
ಸಿಪ್ಪೆಯ ತೆಗೆವಾಗದು ಜಾರೆ
ಕತ್ತನು ಬಗ್ಗಿಸಿ ಸನ್ನೆಯೊಳೊರೆದನು
"ಸುಂದಕ್ಕನೆ ಹಣ್ಣನು ತಾರೆ" ॥ ೨ ॥

ಪೆಪ್ಪರಮಿಂಟನು ತಿಂದ ಸದಾಶಿವ
ಬೆರಳಲಿ ತೆಗೆದನು ಬಾಯಿಂದ
ಥೊಪ್ಪನೆ ನೆಲಕದು ಬೀಳಲು, ನುಡಿದನು
"ಸುಂದಕ್ಕನೆ ತಾ ಬೇರೊಂದ" ॥ ೩ ॥

ಗಿಡ್ಡದ ಕಾಗದ ಬರೆದ ಸದಾಶಿವ
ಸೀಸದಕಡ್ಡಿಯ ಬಲದಿಂದ

ಕಡ್ಡಿಯು ಮುರಿಯಲು, "ಲೇಖಣಿ ಹಿಡಿವುದು
ಸುಂದಕ್ಕನೆ ಬಲು ಸೊಗಸೆ"ಂದ || ೪ ||

ಸುಂದಕ್ಕನ ಕಾಡುವನು ಸದಾಶಿವ
ನಗುವನು – ಅಳುವನು – ಮತ್ತೋಡಿ
ಮುಂದೆ ಮುಗುಳ್ನಗೆ ಬೀರಿ ಕುಣಿಯುವನು
ಹೇಳುವುದೆಂತವನಾ ಮೋಡಿ || ೫ ||

---

## ೪. ದನ



ಪುಟ್ಟ ಕರುವು ತನ್ನ ತಾಯ
ಹಾಲ ಕುಡಿಯಲಮ್ಮ
ಕಟ್ಟಿಹಾಕಿ ಕರುವ, ದನವ
ಕರೆಯಲಾಗದಮ್ಮ || ೧ ||

ಪುಟ್ಟ ನಮ್ಮ ತಮ್ಮನಮ್ಮ
ನಿನ್ನ ಮೊಲೆಯನುಂಡು
ಪಟ್ಟ ಸುಖವ ನೆನೆದುಕೊಂಡು
ಮತ್ತೆ ಹಾಲ ಹಿಂಡು || ೨ ||

ಪುಟ್ಟ ಕರುವು ಕುಡಿದು ಮತ್ತೆ
ಬಿಟ್ಟ ಹಾಲ ತೊಟ್ಟು
ಬೆಟ್ಟವೆಂದು ನೆನೆವುದೊಂದು
ನಮ್ಮ ದಯೆಯ ಗುಟ್ಟು || ೩ ||

ಗೋವು ನಮ್ಮ ಸಿರಿಯ ಹುಟ್ಟು
ಅದನು ಕೊರಗಬಿಟ್ಟು
ನಾವು ಕೆಟ್ಟುಹೋಗಬಾರ
ದಿದುವೆ ಧರ್ಮಕಟ್ಟು || ೪ ||

---

## ೫. ಭೂತ

ರಾತ್ರಿಯೂಟ ಮುಗಿಸುತಂದು
ಮಂಚದಲ್ಲಿ ಒರಗಲೊಂದು
ದೊಡ್ಡ ಭೂತವೆನ್ನಯಿದಿರಿನಲ್ಲಿ ಬಂದು ನಿಂತಿತು ||
ಮೂರುಹತ್ತು ಅಡಿಯ ಗಾತ್ರ
ಕೆಂಪು ಕೆಂಪಗಿರುವ ನೇತ್ರ

ಕೋರೆಹಲ್ಲುಯಿರುವ ಬಾಯ ಮುಖವ ತೋರಿ
ನಲಿಯಿತು ॥ ೧ ॥

ಎದೆಯೊಳಾಯ್ತು ಬಡಬಡಿಕೆಯು
ಮನದೊಳಾಯ್ತು ತಲ್ಲಣಿಕೆಯು
ಇನಿತಾದರು ಧೈರ್ಯ ತಳೆದು ಪೇಳ್ದೆ
"ನಡೆಯೊ ಭೂತವೆ! ॥
ಸೊಲ್ಲ ಕೇಳು — ನಿನ್ನ ಗುಲ್ಲು
ನಡೆಯದಿಲ್ಲಿ!—ನಿನ್ನ ಹಲ್ಲು
ಮುರಿದುಬಿಡುವೆ! ಹಿಡಿಯೊ ಹುಲ್ಲು—
ಕಂದನಲ್ಲಿ ಆಟವೆ?" ॥ ೨ ॥

ನನ್ನ ನುಡಿಯು ಗುಡುಗು ಶಬ್ದ
ಕಾಯ್ತು ಭೂತವಾಗ ಸ್ತಬ್ಧ
ತನ್ನ ಬಣ್ಣ ಬದಲುಮಾಡಿ ಜಾರಿತೆನಗೆ ಬಗ್ಗುತ ॥
ಧೈರ್ಯವಿರಲು ಸರ್ವಸಿದ್ಧಿ
ಅಂಜದಿರುವ ಸರಳ ಬುದ್ಧಿ
ಯಿಂದ ನಡೆಯಲಾಗ ವೃದ್ಧಿಯೆಂದು ತಿಳಿದೆ ಹಿಗ್ಗುತ
॥ ೩ ॥

# ೬. ನಾಯಿ



ನಾಯಿ ಸದಾ ಕಾಯುತಿಹುದು
　ನಮ್ಮ ಮನೆಯ ಬಾಗಿಲ
ಬಾಯಿ ಬಿಡಲು ಹುಲಿಯ ಹಾಗೆ
　ಬೊಬ್ಬಿರಿವುದು ಬಹು ಬಲ ॥ ೧ ॥

ಕಚ್ಚುವಂತೆ ತೋರಿ ಬರುವ
　ಜನರನಟ್ಟುತಿರುವುದು
ಎಚ್ಚರಿದ್ದು ರಾತ್ರಿಯಲ್ಲಿ
　ಕೆಚ್ಚಿನಿಂದ ಕಾವುದು ॥ ೨ ॥

ಸಲಹಿದವರ ಮೇಲೆ ಮಮತೆ
　ನಾಯಿಯಂತೆ ಯಾರಿಗೆ?
ಕೆಲಸವೆಲ್ಲ ತನ್ನ ಸೇವೆ
　ಯೆಂಬ ಭಾವ ನಾಯಿಗೆ ॥ ೩ ॥

## ೭. ಲಂಕಾದಹನ

ಹನುಮನು ಸೀತೆಯ
ನೋಡಿದನು
ರಾಮನ ಮುದ್ರಿಕೆ
ನೀಡಿದನು
ಹಣ್ಣಿನ ಕಾಡನು
ನೋಡಿದನು
ಮಂಗನ ಚೇಷ್ಟೆಯ
ಹೂಡಿದನು
ಕಾಡನು ಪುಡಿಪುಡಿ
ಮಾಡಿದನು
ರಕ್ಕಸರಲಿ ಹೋ
ರಾಡಿದನು
ಬ್ರಹ್ಮಾಸ್ತ್ರಕೆ ಮೈ
ನೀಡಿದನು
ರಾವಣನೆದುರೋ
ಡಾಡಿದನು
ಮಿಕ್ಕವರನು ಬಲು
ಕಾಡಿದನು
"ಶ್ರೀರಾಮ್ ಜೈರಾಮ್"
ಹಾಡಿದನು
ಬಾಲವನುದ್ದಕೆ
ನೀಡಿದನು

ಕೋರೆಯ ಹಲ್ಗಳ
ತೀಡಿದನು
ರಾವಣನುಗ್ರತೆ
ತಾಳಿದನು
ಭಟರನು ಕೂಗುತ
ಹೇಳಿದನು
"ಹಿಡಿಯಿರಿ ಮಂಗನ
ರಟ್ಟೆಯನು
ಬಾಲಕೆ ಸುತ್ತಿರಿ
ಬಟ್ಟೆಯನು
ಎಣ್ಣೆಯೊಳದ್ದಿರಿ
ಮತ್ತದನು
ಬಾಲದ ಮಂಗನಿ
ಗೀ ಹದನು
ಉರಿಯಿಕ್ಕಿರಿ ಬಾ
ಲದ ತುದಿಗೆ
ದೂತನ ಕೊಲೆ ಸರಿ
ಯೇ ನಮಗೆ?
ತಿಮ್ಮನ ಲಾಗವ
ಕಣ್ಣಿಂದ
ನೋಡಲು ಮೂಡುವು
ದಾನಂದ"
ಉರಿಯಿಕ್ಕಲು ಬಾ
ಲಕೆ, ಆದನು

ಬೀಸುತ ನೆಗೆದನು
ಕೋಡಗನು
ಮನೆಮನೆ ಸುಟ್ಟನು
ಹಾರುತ್ತ
ಧಗಧಗನುರಿಯಿತು
ಪುರವೊತ್ತ
ಹಾಹಾಕಾರದೊ
ಳೊದರುತ್ತ
ರಕ್ಕಸರೋಡಿದ
ರತ್ತಿತ್ತ
ಲಂಕಾದಹನದ
ನೋಟವನು
ದನುಜರು ಪಡುತಿಹ
ಕಾಟವನು
ನೋಡುತ ಹನುಮನು
ಹರುಷದಲಿ
ಬಾಲವ ಮುಳುಗಿಸಿ
ಜಲಧಿಯಲಿ
ತಣಿಸಿದನುರಿಯನು
ಗಳಿಗೆಯಲಿ
"ಶ್ರೀರಾಮ್ ಜೈರಾಮ್"
ಎನ್ನುತಲಿ
ಸೀತೆಗೆ ಮಣಿಯುತ
ಹೊರಟ

ಸಂಭ್ರಮದಲಿ ರಾ
ಮನ ಬಂಟ

ಭಳಿರೇ ಭಾಪುರೆ
ಹನುಮಂತ
ರಾಮನ ದೂತನೆ
ಗುಣವಂತ
ವಾಯುಕುಮಾರನೆ
ಬಲವಂತ
ವಾನರರಲಿ ನೀ
ಮತಿವಂತ

---

## ೮. ಅರಗಿಳಿ

ರಾಗ: ಮಾಯಾಮಾಳವಗೌಳ — ಅಷ್ಟತಾಳ
ಧಾಟಿ: (ಗಿಳಿಯು ಪಂಜರದೊಳಿಲ್ಲ)

ಗಿಳಿಯು ಪಂಜರದೊಳುಂಟು || ಪಲ್ಲ ||

ಪಂಚರತ್ನದಿಂದ ಗೈದ
ಪಂಚವರ್ಣ ಪ್ರತಿಮೆಯಂತೆ
ಪಂಚವರ್ಣದ ರೆಕ್ಕೆಯಾಂತು
ಚಿಂತಿಸುತ್ತ ಕುಳಿತುಕೊಂಡ || ೧ ||

ಇರುವ ಕಡೆಯೆ ತಿಂಡಿತಿನಸು
ತರಿಸಿಕೊಂಡು ತಳಿತ ಹಣ್ಣ

ಅರಸುಗಿಳಿಯು ಹೆಸರಿನಂತೆ
ಅರಸನೇಳ್ಗೆಯಿಂದ ನಲಿವ ॥ ೨ ॥

ಹಿರಿದು ಜೇನಿನಂತೆ ಸವಿಯ
ಸುರಿವ "ರಾಮ ರಾಮ" ನುಡಿಯ
ಸೊರೆದು ಭಾಗ್ಯಶಾಲಿಯೆನಿಸಿ
ಮೆರೆವ ಕನ್ನಡಪಕ್ಕಿಯೆಂಬ ॥ ೩ ॥

---

## ೯. ಮಳೆ



ಬಂತು ಮಳೆಯು ಬಂತು! ತಂದಿ
ತದನು ತೆಂಕುಗಾಳಿಯು
ಬಂತು ಧಗೆಗೆ ದಗೆಯು—ಶಾಂತ
ವಾಯ್ತು ನೆಲದ ಧೂಳಿಯು

ತುಂತುರಾಗಿ ಸರಿಯು ಸುರಿದು
ಬಿತ್ತು ನೀರಗೋಳಿಯು || ೧ ||

ಸಿಡಿಲು ಮಿಂಚು ಗುಡುಗು ಬಡಿದು
ನಡುಗಿಸುವುದು ನೆಲವನು
ಬಿಡದೆ ಜಡಿವ ಮೋಡ ಮುಸುಕಿ
ಕೆಡಿಸುತಿಹುದು ನಲವನು
ಪಿಡುಗಿನಂತೆ ಪಿಡಿದ ಮಳೆಯು
ಬೆಳೆಯಿಸುವುದು ಹೊಲವನು || ೨ ||

---

## ೧೦. ನಾಟಿ (ನೇಜಿ) ಹಾಡು

ವಂದಿಪೆವಮ್ಮಾ ಭೂಮಾತೆ || ಪಲ್ಲ ||

ಮುಂಗಾರುಮಳೆಗೆ ಹಸನಾದ ಗದ್ದೆ
ಯಂಗಣದಲ್ಲಿ ಭೂಮಾತೆ
ಮಂಗಳಹಾಡ ಹಾಡುವ ನಮ್ಮ
ಹೆಂಗಳ ಕಾಯೇ ಭೂಮಾತೆ || ೧ ||

(ಹರುಷದ ಆಲಾಪ) ಲೇಲೇಲೆ–ಲೇಲೇ–ಓಬೇಲೆ
ಮೈಯರೆಬಾಗಿ *ಕೆಯ್ಯಗೆಸೂಡಿ
ಕೈಯಾಂತುದಿದುವೆ ಭೂಮಾತೆ
ಒಯ್ಯನೆ ನಿನಗೆ ಹಸುರಿನ ಸೀರೆ
ಮೈಯಲ್ಲಿ ಹೊದಿಕೆ ಭೂಮಾತೆ || ೨ ||

---

* ಕೆಯ್ಯಗೆ = ಭತ್ತದ ಚಿಕ್ಕ ಸಸಿ (ನೇಜಿ)

(ಆಲಾಪ) ಲೇಲೇಲೆ – ಲೇಲೇ – ಓಬೇಲೆ

ಮಂಗಳ ಬೆಳೆಗೆ ನಿನ್ನೆಡೆ ಬಾಗಿ
ಸಿಂಗರಿಸುವೆವು ಭೂಮಾತೆ
ಬಂಗಾರ ಬೆಳೆಯ ನಮಗಿತ್ತು ನೇಜಿ
ಹೆಂಗಳ ಕಾಯೇ ಭೂಮಾತೆ || ೩ ||

(ಆಲಾಪ) ಲೇಲೇಲೆ – ಲೇಲೇ – ಓಬೇಲೆ

---

## ೧೧. ಕಂದನಿಗೆ ಬುದ್ಧಿವಾದ

(ಸಾಂಗತ್ಯ)

ಮುದ್ದು ಮಗುವೆ ನೀನು ಸದ್ದಿಲ್ಲದೆ ಅಭಿ
ವೃದ್ಧಿಯ ತಾಳುತ ನಲಿದು
ಶ್ರದ್ಧೆಯಿಂದಾಟಪಾಟಗಳನ್ನು ಕಲಿತು ಪ್ರ
ಬುದ್ಧನಾಗುತ ಮೆರೆಯುವುದು || ೧ ||

ರಾಮನವೊಲು ಕಾರ್ಯಶೀಲನಾಗಿರು ಮತ್ತೆ
ಭೀಮನೋಲ್ ಬಲಕಾಯನಾಗು
ಸೋಮನವೊಲು ಮಂದಹಾಸವ ತಳೆದು ಸು
ಕ್ಷೇಮವನಾಂತು ಬಳೆವುದು || ೨ ||

ಹರಿಶ್ಚಂದ್ರ ನೃಪನಂತೆ ಸತ್ಯವ ಬಿಡದಿರು
ಧರಣೀಶ ಗೌತಮನಂತೆ
ಕರುಣೆ ತೋರುವುದಯ್ಯ ಸಕಲ ಪ್ರಾಣಿಗಳಲ್ಲಿ
ತೊರೆವುದು ಗರ್ವವ ಸತತ || ೩ ||

ಇಂದಿನ ಸಸಿ ನಾಳೆ ಮರವಾಗುವ ತೆರ
ದಿಂದಿನ ಮಗುವಾದ ನೀನು
ಮುಂದಿನ ಪ್ರಜೆಯಾಗಿ ನಲಿಯುವೆ! — ಹೆಜ್ಜೆಯ
ಮುಂದಿಡು! — ಸ್ವರ್ಗ ಲಭಿಪುದು || ೪ ||

---

## ೧೨. ನರಿಯೂ ದ್ರಾಕ್ಷೆಯಹಣ್ಣೂ

ಫಲಗಳು ತುಂಬಿದ ದ್ರಾಕ್ಷೆಯ ಬಳ್ಳಿಯ
ನೋಡುತ ಹಿಗ್ಗಿತು ನರಿಯೊಂದು
ಹತ್ತಿರ ಹೋಯಿತು; ಮೇಲಕೆ ಹಾರಿತು
ಬಾಯಿಗೆ ಎಟಕದು ದ್ರಾಕ್ಷೆಯದು || ೧ ||

ಮನದಲಿ ನೊಂದಿತು; ಹಾರಿತು ಹಾರಿತು —
ಮಗಚುತ ಬಿದ್ದಿತು ನೆಲದಲ್ಲಿ
ಕೋಪದಿ ಕಿಡಿಕಿಡಿಯಾಗುತ ದ್ರಾಕ್ಷೆಯ
ಕುಲವನು ಬಯ್ದಿತು ತಾನಲ್ಲಿ || ೨ ||

"ಹಣ್ಣಿನ ಜಾತಿಯು ನೋಡದೆ ಹಾರಿದೆ
ದ್ರಾಕ್ಷೆಯು ಮುಟ್ಟೆನು — ಹುಳಿ ಹಣ್ಣು
ನೋಡದೆ ಹಾರಿದ ಕಾರಣವಾಯಿತು
ನನ್ನಯ ಬಾಯಿಗೆ ಬರಿ ಮಣ್ಣು" || ೩ ||

---

## ೧೩. ಕೊರೆಯ ಯುದ್ಧದ ಹಾವಳಿ

ಯುದ್ಧವಂತೆ! ಯುದ್ಧವಂತೆ!
"ಕೊರಯ" ಅಂತೆ! "ಕೊರಯೊ" ಅಂತೆ!
ಕೊರೆಯ ಯುದ್ಧ ಧರೆಯು ಬಿರಿಯುವಂತೆ ಭರದಿ
ಸಾಗಿದೆ ||

ಆ ಟಿಬೇಟಿನೊಳಗಶಾಂತಿ
ಈ ನೆಪಾಳದಲ್ಲಿ ಕ್ರಾಂತಿ
ಎಲ್ಲೆಲ್ಲಿಯು ಮಹಾಭ್ರಾಂತಿಯೊಂದೆ ತುಂಬಿ
ಹೋಗಿದೆ || ೧ ||

'ರೇಶನ'ಂತೆ! — ಊಟವೊಂದೆ
'ಕಂಟ್ರೋಲ'ಂತೆ! — ಬೆಲ್ಲದುಂಡೆ
ಮಾಯವಾಗಿ ಕಾಫಿಗೊಂದು ದೊಡ್ಡ ಸೊನ್ನೆ ಬಿದ್ದಿದೆ ||
ದವಸಗಳಾ ಬೆಲೆಯು ಏರಿ
ದಿವಸಗಳಾ ನೆಲೆಯು ಜಾರಿ
ತಿಂಡಿತಿನಸುಗಳಿಗೆ ಮಾರಿಹಿಡಿದು ದಿಗಿಲು ಎದ್ದಿದೆ
|| ೨ ||

ದೇಹದಲ್ಲಿ ತ್ರಾಣವಿಲ್ಲ
ಮನಸಿನಲ್ಲಿ ಹರುಷವಿಲ್ಲ
ಆಟ - ಪಾಟ - ಕೂಟಕೆಲ್ಲ ಮಾಟವಾಯ್ತು ದೇವನೆ ||

ಪ್ರೇಮಭಾವವನ್ನು ತಳೆದು
ಜಗದೊಳೆಲ್ಲರೊಲಿದು ನಲಿದು
ಶಾಂತಿಯಾಂತು ಬಾಳುವಂತೆ ಹರಸು ವಿಶ್ವನಾಥನೆ
|| ೩ ||

---

ರೇಶನ್ - ಹಸುಗೆಯ ಪದ್ಧತಿ. ಕಂಟ್ರೋಲ್ — ನಿಯಂತ್ರಣ.

# ೧೪. ರಾಟೆಯ (ಚರಕದ) ಮಹತ್ವ



ರಾಗ: ಕಮಾಜು — ಆದಿತಾಳ
ಧಾಟಿ: (ಕಡು ಧೀರನೆ ಶೂರನೆ)

ಎಲೊ ಮಾನವ ಮನಸಿನ | ಬಯಕೆಯ ಸಲಿಸುವ
ಕಲ್ಪವೃಕ್ಷ | ರಾಟೆ | ಯೋಗ್ಯಭೂಪ || ಪಲ್ಲ ||

ಹೊರೆಯಲು ಹೊಟ್ಟೆಯ | ಬಳಲಲುಬೇಕೆ
ಅರಸುತ ಕೆಲಸವ | ತೊಳಲಲುಬೇಕೆ
ಸ್ಥಿರ ವರಮಾನವ ಅನ್ನವ ನೀಡುವ – ಕಲ್ಪವೃಕ್ಷ || ೧ ||

ಗರಗರ ಎನ್ನುತ | ಸರಸದಿ ಕೂಗಿ
ತಿರುತಿರುಗುತ ಝೇಂ | ಕರಿಸುತ ಬಾಗಿ
ನಿರತ ಸುಕರ್ಮದ ಮಹಿಮೆಯ ಸಾರುವ – ಕಲ್ಪವೃಕ್ಷ
|| ೨ ||

ಪರದಾಸ್ಯದಿ ಬಳ | ಲಿದ ಭಾರತಕೆ
ವರ ಸ್ವಾತಂತ್ರ್ಯದ | ಸುಧೆಯುಣಿಸಲಿಕೆ
ಹರುಷದಿ ಗಾಂಧಿಮಹಾತ್ಮನು ಮೆರಸಿದ — ಕಲ್ಪವೃಕ್ಷ
|| ೩ ||

---

## ೧೫. ಬುದ್ಧದೇವನ ಮಾರ್ಗ



ಬುದ್ಧನೊಂದು ಕಥೆಯ ಕೇಳಿ
ತಿದ್ದಿಕೊಳ್ಳಿ ಬಾಲರೆಲ್ಲ
ಬುದ್ಧಿಯನ್ನು ಕಲಿತು ಸುಪ್ರಬುದ್ಧರಾಗಿರಿ ||
ಶುದ್ಧವಾದ ನಡತೆಯಿಂದ
ಬದ್ಧವಾದ ಮಾತಿನಿಂದ
ವೃದ್ಧರಾಗಿ ಲೋಕದಲ್ಲಿ ನೀವು ಬಾಳಿರಿ || ೧ ||

ಪರರಿಗಾಗಿ ದುಡಿಯಬೇಕು
ತೊರೆಯಬೇಕು ಸ್ವಾರ್ಥವನ್ನು
ಪರರ ಹಿಂಸೆಯತ್ತಣಿಂದ ದೂರ ಸರಿಯಿರಿ ||

ಸಿರಿಯ ಹೆಚ್ಚಳಕ್ಕೆ ಬಾಯ
ತೆರೆದು ಮತ್ತೆ ಪರದೊಳಿಹದೊ
ಳೆರಡರೊಳಗೆ ಕೇಡಮಾಡಿಕೊಳ್ಳಬೇಡಿರಿ || ೨ ||

ಪ್ರೊಡವಿಯೊಡೆತನಕೆ ಬಾಯ
ಬಿಡದೆ, ಮಡದಿಮಕ್ಕಳಾಸೆ
ಪಡದೆ, ಜಡತೆ ಬಿಟ್ಟು ಗೇಯ್ದು ಬುದ್ಧನಾದನು ||
ಮಡಿಯ ನಡತೆ ಹಿಡಿದು, ಜನರ
ನಡತೆಯನ್ನು ತಿದ್ದಿ, ಶಾಂತಿ
ಪಡೆದು ಪಡಿಸಿದಂತೆ ನೀವು ನಡೆದು ಬಾಳಿರಿ || ೩ ||

---

## ೧೬. ಕನ್ನಡಮಾತೆ

ರಾಗ: ಭೈರವಿ—ಏಕತಾಳ
ಧಾಟಿ: (ದೇವಿ ಭುವನಮನಮೋಹಿನಿ)

ಮಾತೆ, ವಿಮಲಗುಣಶೋಭಿತೆ
ಕನ್ನಡ ಭುವನೇಶ್ವರಿ, ಸುಖದಾತೆ
ನಮಿಪೆವು ನುತಚರಿತೆ || ಪಲ್ಲ ||

ಗಿರಿದರಿಗಳ ಹೊಲಗಳ ಬೆಡಗಿಂದೆ
ತರುಲತೆಗಳ ಸುಮಗಳ ಸೊಬಗಿಂದೆ
ಹರಿವ ನದೀನದಗಳ ಬಿಣ್ಪಿಂದೆ
ತಿರೆಯ ತಿಲಕದೋಲ್ ಶೋಭಿಪೆ || ೧ ||

ಗುಡಿಗೋಪುರ, ದೇಗುಲಗಳ ಪೆಂಪು
ನಿಡುಕರಗಳ ವಿಗ್ರಹಗಳಲಂಪು

ಅರಮನೆ, ನೆಲಮನೆಗಳ ಕಡುಸೊಂಪು
ಪೊಣ್ಮಿರೆ ಬಿಡಯದೆ ರಾಜಿಪೆ || ೨ ||
ಕವಿಗಳು, ಗಮಕಿಗಳುರೆ ಚಿತ್ರಕರು,
ರೂವಾರಿಗಳಘಟಿನ ಬಲಯುತರು,
ನೃಪಶ್ರೇಷ್ಠರು, ಸಚಿವರು, ಧೀಯುತರು
ಎಸೆಯುಲೆಸಕದೆ ವಿರಾಜಿಪೆ || ೩ ||
ಜನನೀ ನಿನ್ನನು ಜಾನಿಸಿ, ನುತಿಸಿ
ಸೇವಿಪ ಭಾಗ್ಯವ ಕರುಣಿಸು ಹರಸಿ
ಕನ್ನಡಮಂತ್ರವ ಚಿತ್ತದಿ ನಿಲಿಸಿ
ಬಾಳನು ಬೆಳಗಿಸು ಸಂತತ || ೪ ||

---

## ೧೭. ರಾಮನ ವನವಾಸ

ತಂದೆಯ ಸತ್ಯವ
ಕಾಪಾಡುವುದಕೆ
ತಾಯಿಗೆ ಸಂತಸ ಹೆಚ್ಚಲಿಕೆ
ತನ್ನೊಂದಾತ್ಮವ
ಸಂಶೋಧಿಸಲಿಕೆ —
ಹೋಗುವೆನೀಗಲೆ ಕಾನನಕೆ || ೧ ||
ಆ ರಾಮನ ಕಂ
ಡಾಗಲೆ ಲಕ್ಷ್ಮಣ
ಬೆಂಬಳಿಹಿಡಿದನು ಭ್ರಾತೃವಿನ
ಭಕ್ತಿಯ ಸೇವೆಯ
ಮಾದರಿ ತೋರುವ
ಧೀರಗೆ ತಮ್ಮಗೆ ಬೇಕು ವನ || ೨ ||

ಪತಿಗತಿಯನು ಸತಿ
ಯನುಸರಿಸುವುದತಿ
ಹಿತವೆಂದರಿತಾ ಸತಿ ಸೀತೆ



ನಾರುಡೆಯುಟ್ಟವ
ನೊಡನಡಿಯಿಟ್ಟಳು
ಜೆಂಬಿಡದಯ್ದುವ ನೆರಳಂತೆ ॥ ೩ ॥

# ೧೮. ಬೇಸಾಯಗಾರ



ರಾಗ: ಕಾಂಬೋಧಿ — ಅಷ್ಟತಾಳ
ಧಾಟಿ: (ಮಾತಾಡಬಾರದೇನೊ)

ಆರಂಬಗಾರನಿಗೆ । ವಂದಿಸು ಮುನ್ನ ॥ ಪಲ್ಲ ॥
ಯಾರ ಕೈಯೊಳು ಜನ । ಜೀವನವಿರುವುದೋ ॥ ಅ. ಪ. ॥

ಹಾರುವನಾದರೇನ್ । ಹೋರುವನಾದರೇನ್ ।
ತೋರನು ದಾರಿಯ । ನೊಡಲ ತಣಿಸಲಿಕ್ಕೆ ॥ ೧ ॥

ಕಸುಬುಗಳೊಳಗೆಲ್ಲ । ಬೇಸಾಯವೇ ಮಿಗಿಲು ।
ಕಸಿದುಕೊಳ್ಳುವ ಕಸುಬು । ಮಿಕ್ಕುಳಿದುವುಗಳು ॥ ೨ ॥

ಹಸುಳೆ ನೀನಿದನೆಲ್ಲ । ವೋದಿ ತಿಳಿಯಬೇಕು ।
ಹಸನಾದ ಬೇಸಾಯ । ಕೈಕೊಳ್ಳು ಮುಂದಿನ್ನು ॥ ೩ ॥

## ೧೯. ದುರ್ಯೋಧನನ ಪ್ರಲಾಪ

(ಸಾಂಗತ್ಯ)

ಸತ್ತೆಯೊ ಗೆಳೆಯನೆ — ಕರ್ಣನೆ! ನೀ ಹಾ!
ಮತ್ತೆಲ್ಲಿ ಕಾಂಬೆನೊ ನಿನ್ನ
ತೆತ್ತೆಯೊ ಕಳದಲ್ಲಿ ನನಗಾಗಿ ತನುವನು?
ಬತ್ತಿತೆ ನನ್ನೊಳು ಪ್ರೀತಿ? ॥ ೧ ॥

ಮಾತಾಡು! ನಿನ್ನೊಡನೊಡನಾಡಿದವನೆನ್ನ
ಮಾತನಾಲಿಸು ಪ್ರಿಯ ಸಖನೇ!
ಏತಕಾಡುವುದಿಲ್ಲ? — ನಿಜವಾಗಿ ಮಡಿದೆಯಾ?
ಸೋತ ನನ್ನನು ಬಿಡಬೇಡ ॥ ೨ ॥

ದಾನವೀರನೆ — ಯುದ್ಧಧೀರನೆ — ಕಲಿಕರ್ಣ!
ಮಾನಧನನು ಸುಯೋಧನನು
ಮಾನವನಾಗಿಲ್ಲ! — ಜೀವಿಸಲಾರೆನು!
ನಾನು ನಿನ್ನೊಡನಾಡಿಯಹೆನೆ? ॥ ೩ ॥

---

## ೨೦. ದೇವರ ಸಾನ್ನಿಧ್ಯ

ಎಲ್ಲಿರುವನು ಹರಿ? — ಪರಮಪುರುಷನವ
ನೆಲ್ಲಿರುವನು ಜಗದ್ವಲ್ಲಭನು?
ಅಲ್ಲಿ — ಯಿಲ್ಲಿ — ಯೆಲ್ಲೆಲ್ಲಿಯು ತಾನಿಹ
ನೆಲ್ಲರ ಹೃದಯದೊಳಡಗಿಹನು ॥ ೧ ॥

ರವಿಯ ತೇಜದೊಳು, ಶಶಿಯ ಬೆಳಕಿನೊಳು
ಬುವಿಯಾ ಸೊಬಗಿನೊಳಿರುತಿಹನು
ತವೆ ನೀರ್ ಸೆಳವಿನೊಳನಲನ ಝುಳದೊಳು
ಪವನನ ಸುಳಿವಿನೊಳಿರುತಿಹನು ॥ ೨ ॥

ಗಗನದ ನೀರೂಪತೆಯೊಳಗಿರುವನು
ಬಗೆಯಲು ವಿಶ್ವಾತ್ಮಕನೆನಿಸಿ
ಮಿಗೆ ಸಚರಾಚರ, ಸೂಕ್ಷ್ಮಸ್ಥೂಲಗಳೊ
ಳೊಗುತ ತುಂಬಿ ತುಳುಕುತ್ತಿಹನು ॥ ೩ ॥

ಅಂತರ್ಬಾಹ್ಯದಿ ಪೂರ್ಣ ಪರಾತ್ಪರ
ನಂತನಂತ ತಾನಾಗಿಹನು
ಅಂತರ್ಯದೊಳು ಸ್ವತಂತ್ರನೆನಿಸಿ ಚಿತ್-
ಶಾಂತಿಯಿಂದ ತಾಂ ರಂಜಿಪನು ॥ ೪ ॥

---

## ೨೧. ಸ್ವರಾಜ್ಯೋದಯ

(೧೯೪೭ನೆ ಅಗೋಸ್ತು ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದಾಗ ಬರೆದ ಹಾಡು)

ಧನ್ಯಧನ್ಯರಾದೆವಿಂದು
ನಾವು ಜಗದಲಿ
ದಾಸ್ಯತಮವು ಕಳೆದುಹೋಯ್ತು
ಸುಸ್ವರಾಜ್ಯವುದಯವಾಯ್ತು
ಜಯವು ಬೆಳಗಲಿ
ಶತಮಾನವಿಪ್ಪತ್ತು—ವರುಷ ನಾಲ್ವತ್ತೇಳು
ತಿಂಗಳೆಂಟು ದಿನಾಂಕ ಹದಿನಯ್ದನೆ

ಪರದಾಸ್ಯಶೃಂಖಲೆಯ ಕಳಚಿದಾ ಭಾರತವು
ಸ್ವಾತಂತ್ರ್ಯವನು ಗಳಿಸಿತಂದು ದಿಟದೆ
ಪುಣ್ಯದಿನವದು—ವಿಭವಪೂರ್ಣದಿನವದು - ಅಗ್ರ
ಗಣ್ಯದಿನವದು ನಮ್ಮ ಬಾಳ್ವೆಯಲ್ಲಿ
ಇನ್ನೂರು ವರ್ಷಗಳ ಕೈಂಕರ್ಯವನು ಕಳೆದ
ಧನ್ಯತೆಯ ಸುದಿನವದು ಚರಿತೆಯಲ್ಲಿ
ಸ್ವಾತಂತ್ರ್ಯಸಂಗರದಿ ವಿಜಯವನ್ನಾಂತು ಬಲು
ವಿಭವದಿಂದಿರುತಿರುವ ಸ್ವರ್ಣಯುಗದಿ
ಜನತೆಯಾ ಸರಕಾರಸ್ಥಾಪನೆಗೆ ಮೊದಲಾದ
ಸ್ವರ್ಣದಿನವದು ನಮ್ಮ ಇತಿಹಾಸದಿ
ಪರದಾಸ್ಯದಾ ದೀನತೆಯು ಸಡಲಿಸಿತು — ಜಯವು
ಮುಸಗಿ ಶೌರ್ಯದ ಗೆಲವು ತೋರುತ್ತಿದೆ
ತನ್ನತನದಾತ್ಮಶಕ್ತಿಯ ತೇಜವುಜ್ವಲಿಸಿ
ಪ್ರಜ್ವಲಿಸಿ ನಾಲ್ದೆಸೆಯ ಬೆಳಗುತ್ತಿದೆ

ಗಣ್ಯಗಣ್ಯರಾದೆವಿಂದು
ನಾವು ಲೋಕದಿ
ಪಾರತಂತ್ರ್ಯವನ್ನು ನೀಗಿ
ಧರ್ಮನಿಷ್ಠೆಯಿಂದ ಸಾಗಿ
ನಾವು ಲೋಕದಿ

ಸ್ವಾತಂತ್ರ್ಯವನು ಗಳಿಸೆ ದೇಶಭಕ್ತರದೆನಿತೊ
ಆತ್ಮಯಜ್ಞದಿ ಸುಖಿಸಿ ಮಡಿದಿರುವರು
ವೀರ ದಾಧಾಬಾಯಿ, ಶೂರ ಲಜಪತರಾಯ,
ಬಾಲ, ಪಾಲರು, ದಾಸ, ಗೋಖಲೆಯರು,

ಅಲೀಸಹೋದರರು, ವಿಠಲಭಾಯಿ, ನೇತಾಜಿ
ಯವರು ದಾಸ್ಯವ ನೀಗಿಸಲು ದುಡಿದರು
ಆ ಸದಾಶಿವರಾಯ, ದೇಸಾಯಿಯವರೆಲ್ಲಿ?
ಸ್ವಾತಂತ್ರ್ಯ ರಣರಂಗದಲ್ಲಿ ಧುಮುಕಿ
ಮಾಯವಾದರು — ಹರಣಪಿತ್ತರು — ಸಹಸ್ರಾರು
ಮಂದಿ ಅವರಂತೆವೊಲು ಜವನ ಕೆಣಕಿ
ವಿಜಯದಾ ದಿನದಂದು ಬಾಳಿರುವ ಕಡುಗಲಿಗ
ಳೆನಿತು ಪುಣ್ಯವ ಗೈದಿಹರೊ ಪೂರ್ವದಿ
ಆ ಬಾಪೂಜೀ ಗಾಂಧಿ, ನೆಹರು, ರಾಜಾಜೀ, ಸ
ರೋಜಿನಿ, ಶರಶ್ಚಂದ್ರ, ವಲ್ಲಭಾಯಿ
ರಾಜೇಂದ್ರಜಾದ, ಕೃಪಲಾನಿ, ಪಂತರು ತಾವು
ಮುನ್ನಡೆಯೆ ಪಥದೋರಿ ಮೆರೆಯುತಿಹರು

ಮಾನ್ಯಮಾನ್ಯರಾದೆವಿಂದು
ನಾವು ಧರೆಯಲಿ

ನಮ್ಮ ಜನರ ನಾವೆ ಆಳಿ
ನೆಮ್ಮದಿಯಲಿ ಸೊಗದಿ ಬಾಳಿ
ನಾವು ಧರೆಯಲಿ

ಏನು ಧನ್ಯನೊ ನೋಡಲಾ ಮಹಾತ್ಮಾಗಾಂಧಿ
ಏನು ಗಣ್ಯನೊ ನಮ್ಮ ಇತಿಹಾಸದಿ
ಹಿಂದೀಸ್ವರಾಜ್ಯವನು ಗಳಿಸಲಿಕೆ ತನ್ನ ತನು
ಮನಧನವ ತೆತ್ತಿಹನು ನಿಸ್ವಾರ್ಥದಿ
ಏನು ಧನ್ಯನೊ ಮುಖ್ಯಮಂತ್ರಿಯು ಜವಾಹರನು
ಪಂಡಿತನು ರಾಜ್ಯಾಂಗರಚನೆಯಲ್ಲಿ

ಉಡುಗಣದ ಮಧ್ಯದಲಿ ಶೋಭಿಸುವ ಶಶಿಯಂತೆ
ಯೆಸೆವನಾತನು ಮಂತ್ರಿಮಂಡಲದಲಿ
ಸ್ವಾತಂತ್ರ್ಯಸುಧೆಯಿಂದ ತಣಿದಿರುವ ಭಾರತವು
ಮಾನವಸಮಾನತೆಯ ನೀತಿಯಿಂದ
ಆದರ್ಶವಾಗಿರಲಿ ಪರರಾಷ್ಟ್ರಗಳಿಗೆಲ್ಲ
ಅಮರವಾಗಲಿ ಆತ್ಮಶೋಭೆಯಿಂದ
ಶಾಂತಿಯನು ಪಸರಿಪ ಅಶೋಕಚಕ್ರವನಾಂತು
ಮೆರೆವ ರಾಷ್ಟ್ರಧ್ವಜವು ಹಾರಾಡಲಿ
ಹೊಳೆಯುವ ತ್ರಿವರ್ಣದಿಂ ಜನಮನವ ರಂಜಿಸುವ
ಬಾವುಟವು ದಿವ್ಯಸುಖ ನೆಲೆಗೊಳಿಸಲಿ
ಧನ್ಯಧನ್ಯರಾದೆವಿಂದು
ನಾವು ಜಗದಲಿ
ದಾಸ್ಯತಮವು ಕಳೆದುಹೋಯ್ತು
ಸುಸ್ವರಾಜ್ಯವುದಯವಾಯ್ತು
ಜಯವು ಬೆಳಗಲಿ!

---

## ೨೨. ಬೇಡಿಕೆ

ರಾಗ: ಸಾರಂಗ — ರೂಪಕ ತಾಳ

ಧಾಟಿ: (ಅನುದಿನ ಭವಾಬ್ಧಿಯಲ್ಲಿ)

ಅನುದಿನ ಮಹೇಶ ನಿನ್ನ
ಚರಣಯುಗ್ಮವನ್ನು ಸ್ಮರಿಪೆ
ಜನಕ ಪೊರೆವುದೆನ್ನ ಸದಾ
ಕರುಣಾಬ್ಧಿ ದೇವಾ || ಪಲ್ಲ ||

ದುರಿತವನ್ನು ಕಳೆದು ನಿರತ
ಧರ್ಮಮಾರ್ಗದಲ್ಲಿ ನಡೆವ
ತೆರದಿ ಮತಿಯನೀವುದಯ್ಯ
ಪತಿತಪಾವನಾ
ತೊರೆದು ಸ್ವಾರ್ಥವನ್ನು ಬಗೆದು
ಪರಹಿತವನು ತನುವನಿದನು
ಪರಸೇವೆಯೊಳ್ ಸವೆಯಿಸುವಾ
ಭಾಗ್ಯವೀಯೊ ಲೋಕೇಶಾ ॥ ೧ ॥

---

ಓಂ

## ೧. ಬ್ರಾಹ್ಮಣರ ದಾರಿ ಸ್ವಲ್ಪ ಬೇರೆ ಇರಲಿ.

ಈ ಚಿಕ್ಕ ಪುಸ್ತಕವನ್ನು ಬ್ರಾಹ್ಮಣರನ್ನುದ್ದೇಶಿಸಿ ಬರೆದುದಾಗಿದೆ. ಸರಕಾರದ ದೃಷ್ಟಿಯಲ್ಲಿ, ಅದರ ಎಲ್ಲಾ ವ್ಯವಹಾರಗಳಲ್ಲಿ, ಅದರ ವಿದ್ಯಾ ಪೀಠಗಳಲ್ಲಿ, ಅಲ್ಲಿನ ವಸತಿಗ್ರಹಗಳಲ್ಲಿ, ಮತ್ತು ನಮ್ಮಲ್ಲನೇಕರಲ್ಲಿ ಎಲ್ಲ ಜನರು ಒಂದೆ ಎಂಬುದು ಈಗಿನ ಸಾಮಾನ್ಯ ಅಭಿಪ್ರಾಯ. ಈಗಿನ ವಿದ್ಯಾರ್ಥಿಗಳ ಭಾವನೆಯೂ ಅದೇ ಆಗಿದ್ದು, ತಮಗೆಲ್ಲ ಒಂದೇ ತರದ ಓದಿನ ಮಟ್ಟ ಅನ್ವಯಿಸುತ್ತದೆಂಬುದು ಅವರ ನಂಬಿಕೆಯಾಗಿದೆ.

ಆದರೆ ನಮ್ಮ ಧರ್ಮಶಾಸ್ತ್ರ ಹಾಗೆ ಹೇಳುವುದಿಲ್ಲ. ಜೀವಾತ್ಮರು ಅನೇಕಾನೇಕ ಬೇರೆ ಬೇರೆ ತರದ ಜನ್ಮಗಳನ್ನು ಕಳೆದು, ಬೇರೆ ಬೇರೆ ತರದ ಅನುಭವದ ಮಟ್ಟ ಏರಿ, ಈಗಳಿನ ಜನ್ಮದಲ್ಲಿ ಮತ್ತೂ ಹೆಚ್ಚಿನ ಅನುಭವ ಪಡೆಯಲೆಂದು, ಅವರವರ ಮಟ್ಟಕ್ಕೆ ತಕ್ಕುದಾದ ಜನ್ಮವನ್ನು ಹೊಂದಿದ್ದಾರೆ ಎಂಬುದು ಅದರ ಮತ. ಎಲ್ಲಾ ತರದ ಮಟ್ಟದ ವಿದ್ಯಾರ್ಥಿಗಳನ್ನು ಒಂದೇ ವರ್ಗದಲ್ಲಿ ಕುಳ್ಳಿರಿಸಿ, ಒಂದೇ ತರದ ಓದು, ಗಣಿತ, ವಿಜ್ಞಾನಗಳನ್ನು ಕಲಿಸುವುದಕ್ಕಿಂತ, ಅವರ ಮುಂಚಿನ ತರಬೇತಿಯಂತೆ ವರ್ಗೀಕರಿಸಿ, ಬೇರೆ ಬೇರೆ ತರದ ಅಭ್ಯಾಸಗಳನ್ನು ಅವರಿಗೆ ನೀಡುವುದು ಹೇಗೆ ಅಗತ್ಯವೆಂದು ತೀರ್ಮಾನಿಸಿ ನಮ್ಮ ವಿದ್ಯಾಪೀಠಗಳು ಕೆಲಸ ಮಾಡುತ್ತವೆಯೋ, ಹಾಗೆಯೇ ಜನರನ್ನು ವರ್ಣಗಳಾಗಿ ಮಾಡಿ ಬ್ರಾಹ್ಮಣರಿಗೆ ಅತಿ ಹೆಚ್ಚು ಕಠಿಣವಾದ ಪಾಠಗಳನ್ನು ಹೇಳುವುದು ಅವರ ಶ್ರೇಯಸ್ಸಿಗೆ ತಕ್ಕುದಾದೀತು, ಫಲಕಾರಿಯಾದೀತು, ಎಂಬುದು ನಮ್ಮ ಧರ್ಮಶಾಸ್ತ್ರಗಳ ನಿರ್ಧಾರ.

ಒಂದು ವಿದ್ಯಾಪೀಠದ ವಾತಾವರಣದಲ್ಲಿ ಕೆಲವು ತೀರಾ ಕೆಳವರ್ಗದ ವಿದ್ಯಾರ್ಥಿಗಳು ಸ್ವಲ್ಪ ಓದು, ಹೆಚ್ಚು ಆಟ, ನಿದ್ರೆ ಮಾಡುವುದು ತಪ್ಪಾಗದಾದರೂ ಅಲ್ಲಿನ ತೀರಾ ಮೇಲಿನ ವರ್ಗದವರು ಅತಿ ಕಠಿಣ ರೀತಿಯಲ್ಲಿ ಓದನ್ನು ನಡೆಸುವುದು ಅವರಿಗೆ ಅತ್ಯಗತ್ಯವಾದೀತಷ್ಟೆ. ಅಂತೆಯೇ ಬ್ರಾಹ್ಮ

ಣರು ಎಂ. ಎ. ವರ್ಗದ ವಿದ್ಯಾರ್ಥಿಗಳಂತೆ ತುಂಬ ವಿಶೇಷ ತರದಲ್ಲಿ ತಪಸ್ವಿಗಳಂತೆ ಶಿಷ್ಟತರದಲ್ಲಿ ತಮ್ಮ ಜೀವನ ನಡೆಸಬೇಕೆಬುಂದು ನಮ್ಮ ಧರ್ಮದ ಹೇಳಿಕೆ.

ಬ್ರಾಹ್ಮಣಸ್ಯ ತು ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।
ಇಹ ಕೃಚ್ಛ್ರಾಯ ತಪಸೆ ಪ್ರೇತ್ಯಾನಂತಸುಖಾಯ ಚ ॥

ತಮ್ಮ ದೇಹವನ್ನು ಕ್ಷುದ್ರ ಕಾಮನೆಗಳಲ್ಲಿ ಉಪಯೋಗಿಸದೆ, ಈ ಅಂತ್ಯದ ವರ್ಗವನ್ನು ಕಷ್ಟವಾದ ತಪಸ್ಸಲ್ಲಿ ಕಳೆದು, ಜನನ ಮರಣದ ಗೊಂದಲದ ಕಡೆಯ ಸಾವನ್ನು ದಾಟಿ, ಅನಂತರ ಅನಂತ ಸುಖ ಪಡೆಯಲು ಅವರು ತಕ್ಕವರು ಎನ್ನುತ್ತದೆ ಧರ್ಮ. ಈ ಅನಂತ ಸುಖದ ಗಡಿ ಮುಟ್ಟಲು ತುದೀ ಮೆಟ್ಟಲಲ್ಲಿದ್ದ ಅವರು, ತಮ್ಮ ತೀರಾ ಹತ್ತಿರವಿರುವ ಈ ಅಪರಿಮಿತ ಭಾಗ್ಯವನ್ನು ಲಕ್ಷಿಸದೆ, ತಮ್ಮ ಬಹಳ ಕೆಳಗಿರುವ ಕ್ಷುದ್ರ ಪಶುವಿಲಾಸಗಳಲ್ಲಿ ಮುಳುಗಿದವರನ್ನು ಕಂಡು ತಾವೂ ಕೆಳಗಿಳಿದು ಅವರ ಅಲ್ಪ ಸುಖಗಳಲ್ಲಿ ತೃಪ್ತಿ ಪಡೆಯುವುದೆಂದರೆ ಚಿಕ್ಕ ಹುಡುಗನ ಆಟಪಾಟಗಳಿಗೆ ಪುನಃ ಆಸೆ ಪಟ್ಟು ಎಂ. ಎ. ತರಗತಿಗೆ ತಿಲಾಂಜಲಿ ಕೊಟ್ಟು, ಅವರೊಡನೆ ಆಡುತ್ತಿದ್ದಷ್ಟು ಮೂರ್ಖತನವಾಗದೆ?

ಈ ಪುಸ್ತಕದಲ್ಲಿ ನಾನು ಮುಖ್ಯವಾಗಿ ಒತ್ತಿ ಹೇಳಬೇಕೆಂದಿರುವುದು ಬ್ರಾಹ್ಮಣರ ಓದು ಸಾಮಾನ್ಯರ ಓದಂತಿದ್ದರಾಗದು; ಅದು ಎಂದೂ ಶುದ್ಧ ತರದ್ದು ಮಾತ್ರ ಇರಬೇಕು; ಆದುದರಿಂದ ನಾವು ನಮ್ಮ ಓದಿನ ರುಚಿಯನ್ನು ಹತೋಟಿಗೆ ತರಬೇಕು; ನಮಗೆ ಅದು ಸಾಧ್ಯ; ಎಂದು.

ಆದರೆ ಈ ಕಾಲದಲ್ಲಿ ವರ್ಣಸಂಕರ ತುಂಬಾ ನಡೆದಿದ್ದು ಜಾತಿಯೇ ಇಲ್ಲದಾಗಿದೆಯಲ್ಲ! ಎಂದು ಕೆಲವರು ವಾದಿಸುವುದುಂಟು. ಆದರೆ ನನಗೆ ಹಾಗೆ ತೋರುವುದಿಲ್ಲ. ವರ್ಣಾಶ್ರಮ ಧರ್ಮ ಕಲಿಯುಗದ 5000 ವರ್ಷಗಳ ನಂತರ ಕ್ಷೀಣವಾಗುವುದಾದರೂ, ಸಂಪೂರ್ಣ ನಾಶವಾಗುತ್ತದೆಂದು ನಮ್ಮ ಶಾಸ್ತ್ರ ಹೇಳುವುದಿಲ್ಲ. ಕಲಿಯುಗದ ತೀರಾ ಅಂತ್ಯಕ್ಕೆ ಬರುವ ಕಲ್ಕಿಯ ಅವತಾರವೂ ಕೂಡ ಬ್ರಾಹ್ಮಣ ಕುಲದಲ್ಲಿ ಎಂದು ಶಾಸ್ತ್ರ ಹೇಳುತ್ತದೆ.

ನಮ್ಮ ಸನಾತನ ಧರ್ಮಕ್ಕೆ ವರ್ಣ ಧರ್ಮವು ತಳಹದಿಯಾಗಿದೆ. ವರ್ಣದ ನಾಶವಾದೊಡನೆ ಧರ್ಮದ ನಾಶವೂ ಆದೀತು. ವರ್ಣಧರ್ಮ ವಿಧಿ

ಸಿದ ದೇವರೇ ಅದರ ಏರ್ಪಾಡಿನ ತನ್ನ ಕೆಲಸ ಮರೆತಾನು, ಎನ್ನವಂತಿಲ್ಲ. ಅಂತೂ ಬ್ರಾಹ್ಮಣನಾಗಿ ಹುಟ್ಟಿದವನು, ತನ್ನನ್ನು ದೇವರು ತಪ್ಪಾಗಿ ಆ ವರ್ಗಕ್ಕೆ ಹಾಕಿರಬೇಕೆಂದು ಭಾವಿಸುವ ಬಗ್ಗೆ, ಅದು ತನ್ನ ಭಾಗ್ಯವೆಂದು ಭಾವಿಸಬೇಕು. ತನಗೆ ಮದ್ಯ, ಮಾಂಸ, ಎಂಜಲು, ಸುಲಭವಾಗಿ ವರ್ಜಿಸಲು ಶಕ್ತಿ ಬಂದುದಕ್ಕೆ, ಕಾಮನೆಯ ಬಯಕೆಯಲ್ಲಿ ಬರೀ ರೂಪಕ್ಕಾಗಿ ಯಾರು ಯಾರನ್ನೋ ಮದುವೆಯಾಗದೆ ಶಾಸ್ತ್ರೀಯ ರೀತಿಯ ಮದುವೆ ಮಾಡಿಕೊಳ್ಳುವ ಸಂಯಮನ ಇದ್ದುದಕ್ಕೆ, ತುಂಬಾ ಬೆಲೆಕಟ್ಟಬೇಕು. ತನ್ನ ಬ್ರಾಹ್ಮಣ ಹುಟ್ಟಿನ ಮೂಲಕ ಅಂತಹ ವಿಶೇಷ ಯೋಗ್ಯತೆ ಕೊಟ್ಟ ಪರಮಾತ್ಮನ ಉದ್ದಿಶ್ಯ ನಿಷ್ಫಲವಾಗದಂತೆ ಯತ್ನಿಸಿ, ಜನ್ಮ ಸಾಫಲ್ಯಮಾಡಿಕೊಳ್ಳಬೇಕು. ಅದಕ್ಕೆ ಬದಲಾಗಿ ಈಗ ವರ್ಣಭೇದ ಇಲ್ಲ ಎಂದು ತಪ್ಪಾಗಿ ಭಾವಿಸಿ, ತನ್ನ ಜನ್ಮವನ್ನು ಕ್ಷುದ್ರ ರೀತಿಯಲ್ಲಿ ಕಳೆದರೆ, ದೇವರು ಮಾತ್ರ ಇನ್ನೂ ಆ ನಿಯಮ ಇಟ್ಟಿದ್ದರೆ, ದೇವರು ದಯಪಾಲಿಸಿದ ಬ್ರಾಹ್ಮಣ ಜನ್ಮವನ್ನು ನಾವು ಭ್ರಷ್ಟಮಾಡಿ ತನ್ಮೂಲಕ ಅವನ ಕೃಪೆಗೆ ಬಾಹಿರರಾದಂತಾದೀತು. ಆದುದರಿಂದ ನಮಗೆ ಮುಂಚೆ ಹೇಳಿದ ಭದ್ರವಾದ ದಾರಿಯೇ ಇರಲಿ.

ವರ್ಣಭೇದ ಈಗ ನಾಶವಾಗಿದೆ ಎಂದು ನಂಬಿಕೆ ಇರುವ ಇತರ ವರ್ಣದವರು ಯಾರಾದರೂ, ತಮ್ಮಲ್ಲಿ ಆತ್ಮ ಶ್ರೇಯಸ್ಸಿಗಾಗಿ ತುಂಬಾ ಲವಲವಿಕೆ ಇರುವುದು ಕಂಡು, ತಾವು "ಬ್ರಾಹ್ಮಣ" ಹೆಸರಿಲ್ಲದವರಾದರೂ, ಆ ಯೋಗ್ಯತೆ ಇದ್ದವರೆಂದು ಭಾವಿಸಿ ಆತ್ಮಶ್ರೇಯಸ್ಸಿಗೆ ಶತಯತ್ನ ನಡೆಸಿ ಸಫಲರಾದರೆ, ಅದೂ ತುಂಬಾ ಒಳ್ಳೆಯದೇ ಆಯಿತು. ಅಂತೂ ದೈವತ್ವಕ್ಕೆ ಏರುವ ದಾರಿ ಹೊರತು ಪಿಶಾಚತ್ವಕ್ಕೆ ಇಳಿಯುವ ದಾರಿ ಇಬ್ಬರಿಗೂ ಬೇಡ.

ನಾನು ವರ್ಣ ವ್ಯತ್ಯಾಸದಲ್ಲಿ ನಂಬಿಕೆ ಇರುವವನಾದುದರಿಂದ, ನನ್ನವರು ತಮ್ಮ ಉತ್ತಮ ಸ್ಥಾನದಿಂದ ಹೊಲಸಿಗೆ ಇಳಿಯುವುದನ್ನು ತಡೆಯಲು ನನ್ನ ಅಲ್ಪಸ್ವಲ್ಪ ಶಕ್ತಿಯನ್ನು ಉಪಯೋಗಿಸಬೇಕೆಂದು, ಅವರನ್ನು ಉದ್ದೇಶಿಸಿ ಈ ಪುಸ್ತಕ ಬರೆದು ಅದರ ಪ್ರಚಾರ ಕೈಕೊಂಡುದಾಗಿರುತ್ತದೆ. ಬ್ರಾಹ್ಮಣೇತರರಿಗೆ ಹೇಳುವ ಧೈರ್ಯ ನನಗಿಲ್ಲ. ಬ್ರಾಹ್ಮಣರು ತಮ್ಮ ಆತ್ಮಶ್ರೇಯಸ್ಸಿಗಾಗಿ ಯತ್ನಿಸಲಿ ಎಂಬುದು ಮಾತ್ರವೇ ನನ್ನ ಆಸೆಯಲ್ಲದೆ, ಇತರರ ಮುಂದೆ ಅವರ ಶ್ರೇಷ್ಠತೆ ಸ್ಥಾಪಿಸುವುದು ನನ್ನ ಗುರಿಯಲ್ಲ.

## ೨. ಈಗಿನ ಓದು ಸರಿಯಲ್ಲ.

ಇತ್ತೀಚೆಗೆ ನಮ್ಮ ಯುವಕರಲ್ಲಿ ಓದುವ ಲವಲವಿಕೆ ತುಂಬಾ ಬೆಳೆಯುತ್ತಿದೆ. ಅದಕ್ಕಿಂತ ಹೆಚ್ಚಾಗಿ ನಮ್ಮ ಪುಸ್ತಕಗಳ, ಪತ್ರಿಕೆಗಳ, ಪ್ರಕಟಣೆ ಏರುತ್ತಿದೆ. ಹಳ್ಳಿಗಳ ಮೂಲೆ ಮೂಲೆಗೂ ಹರಡಲಾರಂಭಿಸಿರುವ ಅವುಗಳಲ್ಲಿ ಬರುವ ವಿಷಯಗಳೂ ಹೆಚ್ಚುಹೆಚ್ಚಾದ ತರದ್ದಾಗುತ್ತಿವೆ. ನೀರೆಂದರೆ ಪವಿತ್ರ ಗಂಗಾ ಜಲದಿಂದ ಹೊಲಸು ಚರಂಡಿಯದ್ದೂ ಇರುವಂತೆ ಪುಸ್ತಕಗಳೂ ಹಲವು ತರದವು ಆಗಿವೆ. ಆದರೆ, ಪ್ರಕಟವಾದುದೆಲ್ಲ ಓದಲಿಕ್ಕೆಂದು; ಕೆಲವರಾದರೂ ಅವನ್ನು ಓದುತ್ತಿರಬೇಕು; ಆದುದರಿಂದ ಅವನ್ನು ನಾವೂ ಓದಬಹುದು; ಎಂದು ನಮ್ಮ ಯುವಕರು ತಿಳಿಯಕೂಡದು. ಹೊಲಸು ನೀರಲ್ಲಿ ಎಮ್ಮೆಗಳೂ ಹಂದಿಗಳೂ ಸಂತೋಷದಿಂದ ವಿರಾಮಿಸುವಂತೆ, ಪಶು ಭಾವನೆಗಳನ್ನಿನ್ನೂ ಬಹು ಮಟ್ಟಿಗೆ ಜೈಸದ ಮನುಷ್ಯರು, ಚರಂಡೀ ನೀರಿಗಿಂತ ಹೊಲಸು ತರದ ಬರಹಗಳನ್ನು ಭಯವಿಲ್ಲದೆ, ನಾಚಿಕೆ ಇಲ್ಲದೆ, ತೀರಾ ಬುದ್ಧಿವಂತರಂತೆ, ಓದುತ್ತಿರುವುದನ್ನು ಕಾಣಬಹುದು. ಆದರೆ ಅವರ ದಾರಿ ನಮಗೆ ಹೇಳಿಸಿದುದಲ್ಲ.

ಚಿಕ್ಕ ಮಗುವು ಮಣ್ಣು, ಕಸ, ಕೊಳೆ, ಗಾಜು ಎಲ್ಲಾ ತಿನ್ನುವುದನ್ನು ತಪ್ಪಿಸಿ, ಅದರ ರುಚಿಯನ್ನು ತಾಯಿಯು ತಿದ್ದಿ ಬೆಳೆಸುವಂತೆ ನಮ್ಮ ಬಾಲಕ ಬಾಲಕಿಯರ ಓದಿನ ಅಭಿರುಚಿಯನ್ನು ಉತ್ತಮವಾದ ದಾರಿಯಲ್ಲಿ ಮಾತ್ರವೇ ಬೆಳೆಯುವಂತೆ ಮಾಡುವುದು ನಮ್ಮ ಹಿರಿಯರೆಲ್ಲರ ಒಂದು ದೊಡ್ಡ ಜವಾಬ್ದಾರಿಯೇ ಆಗಿದೆ ಎಂದು ನನಗೆ ಅನ್ನಿಸುತ್ತದೆ. ಆದರೆ ಬಹು ಮಂದಿ ತಂದೆತಾಯಿಗಳಿಗೆ— ತಾವು ತುಂಬಾ ಬಲ್ಲವರೆನ್ನುವವರಿಗೆ ಕೂಡ— ತಮ್ಮ ಈ ಜವಾಬ್ದಾರಿಯ ಅರಿವು ಇದ್ದಂತೆ ತೋರುವುದಿಲ್ಲ. ಮಕ್ಕಳ ಓದಿನ ವಿಚಾರವೆಲ್ಲ ತಾವು ಶಾಲೆಗೆ ತೆರುವ ಸಂಬಳಕ್ಕಾಗಿ ಅಲ್ಲಿನ ಉಪಾಧ್ಯಾಯರು ನೋಡಿಕೊಳ್ಳಬೇಕು ಎಂಬುದು ಅವರ ನಿರ್ಧಾರ. ಹಾಗೆ ಮಾಡುತ್ತಾರೋ ಎಂದು ನೋಡಲು ಅವರಿಗೆ ತಾಳ್ಮೆ ಇಲ್ಲ, ಸಮಯವಿಲ್ಲ. ಆದರೆ ಶಾಲಾ ಉಪಾಧ್ಯಾಯರಾದರೋ, ತಮ್ಮ ಪಠ್ಯ ಪುಸ್ತಕಗಳ ಹೊರಗಿನ ಜವಾಬ್ದಾರಿ ತಮ್ಮದು ಖಂಡಿತ ಅಲ್ಲ; ತಮಗೆ ಸಿಕ್ಕುವ ಸಂಬಳಕ್ಕೆ ಅದೇ ಧಾರಾಳ; ಎಂದು ನಿರ್ಧರಿಸಿದ್ದಾರೆ. ಮಾತ್ರವಲ್ಲ, ತಮ್ಮ ಸ್ವಂತ ಓದನ್ನೇ ಅವರು ಉತ್ತಮ ರೀತಿಯಲ್ಲಿ ಸಂಸ್ಕರಿಸಿಕೊಂಡುದು ತೋರುವುದಿಲ್ಲ.

ಇನ್ನು ವಾಚನಾಲಯಗಳೂ ಓದನ್ನು ತುಂಬಾ ಹೆಚ್ಚಿಸುತ್ತಿವೆ. ಆದರೆ ಅವಕ್ಕೆ ಓದುಗರ ಬೇಡಿಕೆ ಪೂರೈಸುವುದು ಮಾತ್ರವೇ ಬಹು ಮಟ್ಟಿಗೆ ಧ್ಯೇಯವಾಗಿದೆ: ಅದನ್ನು ಉತ್ತಮ ದಾರಿ ಹಿಡಿಸುವ ಧ್ಯೇಯ ಅವಕ್ಕಿಲ್ಲ.

ಇವುಗಳೆಲ್ಲವುಗಳ ಪರಿಣಾಮವಾಗಿ, ಈಗ ಎಲ್ಲೆಲ್ಲೂ ತುಂಬಾ ಸಿಗುವ ಹಾಳು ಪುಸ್ತಕಗಳ ಓದಿಂದಾಗಿ ಯುವಕರ ಅರಿವು ಹೆಚ್ಚುವ ಬದಲು, ಬುದ್ಧಿ ಬೆಳೆಯುವ ಬದಲು, ಅವರ ಭಾವನೆ ತುಂಬಾ ಕೆಡುತ್ತ ಬರುತ್ತಿದೆ. ಆದಕ್ಕೆ ಪುನಃ ಪುನಃ ಹಾಳು ಒಲವು ಸಿಕ್ಕಿ, ಅವರ ಶೀಲವು ತುಂಬಾ ಡೊಂಕೂ, ಕ್ಷುದ್ರವೂ, ಸಂಕೋಚವೂ ಆಗಿ ಬೆಳೆಯುತ್ತಿದೆ. ಆ ಮೇಲೆ ಯಾವಾಗಲಾದರೊಮ್ಮೆ ಅದು ಅವರ ವರ್ತನೆಯಲ್ಲಿ ಸ್ಪಷ್ಟ ರೂಪುಗೊಂಡು ಹೊರಹೊಮ್ಮಿ ಅವರ ತಂದೆತಾಯಿಗಳಿಗೆ ಗಾಬರಿಗೊಳಿಸುತ್ತದೆ. ಆಗ ಅವರು ತಮಗಾದ ಆಶ್ಚರ್ಯದಲ್ಲಿ, ಗಡಿಬಿಡಿಯಲ್ಲಿ, ತಮಗೇ ಸ್ಪಷ್ಟವಾಗದ ರೀತಿಯಲ್ಲಿ ನಾಲ್ಕು ಬಿರುಸಾದ ಬುದ್ಧಿಯ ಮಾತು ಆರ್ಭಟಿಸಿ, ಮಕ್ಕಳು ಇನ್ನು ಸರಿಯಾದ ದಾರಿಗೆ ಬಂದಾರು ಎಂದು ಆಶಿಸುತ್ತಿರುತ್ತಾರೆ. ಆದರೆ ಆ ನಾಲ್ಕು ಕಿಡಿ ಬೆಂಕಿಯಲ್ಲಿ ಸುಟ್ಟು ಭಸ್ಮವಾಗಲಿಕ್ಕೆ ಮಕ್ಕಳ ಮನಸ್ಸಲ್ಲಿದ್ದ ಕಳೆ ಮೊನ್ನೆ ತಾನೇ ಮೊಳೆತ ಅತಿ ಚಿಕ್ಕ ಗಿಡವಲ್ಲ. ಹಲವು ರಾಶಿ ಪುಸ್ತಕಗಳ ಹೊಲಸು ಸಾರವನ್ನು ಸಾವಿರಾರು ಗಂಟೆ ಹೀರುತ್ತ ಉದ್ದುದ್ದ ಬೇರು ಬಿಟ್ಟು ಸಮೃದ್ಧಿಯಾಗಿ ಬೆಳೆದ ಪೊದೆ ಅದು. ನಾಲ್ಕು ಕಿಡಿ ಬೆಂಕಿ ಅದಕ್ಕೆ ಏನೂ ಮಾಡಲಾರದು. ಕೆಲವುಕಾಲದ ಮೇಲೆ ಅದು ಇನ್ನೂ ಬೆಳೆದು ಹುಡುಗನ ಇನ್ನೂ ಹೆಚ್ಚಿನ ಅತೃಪ್ತಿಕರವಾದ ನಡತೆಯಲ್ಲಿ ತೋರಿಸಿಕೊಳ್ಳಬಹುದು.

ಇದಕ್ಕೆಲ್ಲ ತಂದೆತಾಯಿಗಳೂ ಸಮಾಜವೂ ತಮ್ಮನ್ನು ತಾವೇ ದೂರಿಕೊಳ್ಳಬೇಕು; ಮಕ್ಕಳನ್ನಲ್ಲ. ಏಕೆಂದರೆ ಪ್ರಕೃತಿಯ ನಿಯಮದಲ್ಲಿ ಫಕ್ಕನೆ ಸಂಪೂರ್ಣ ಬದಲಾವಣೆ ಎಂದೂ ಆಗುವುದಿಲ್ಲ. ಈಗಿನ ಹುಡುಗರ ಹುಟ್ಟುಸ್ವಭಾವ ಮೂಲತಃ ಮುಂಚಿನ ಸಾವಿರಾರು ವರ್ಷಗಳ ತರದ್ದೇ ಆಗಿದೆ. ಅದರ ಬೆಳವಣಿಗೆಗೆ ಮುಂಚಿನ ಉತ್ತಮ ವಾತಾವರಣದ ಬದಲಾಗಿ ಹೊಸ ಹೊಲಸು ವಾತಾವರಣವನ್ನು ಉಂಟುಮಾಡುತ್ತಿರುವುದು ಆ ಮಕ್ಕಳಲ್ಲ. ಅದು ಹಿರಿಯರಾದ ನಮ್ಮ ಕೆಟ್ಟ ಕೆಲಸ. ಮುದ್ರಾಯಂತ್ರದ ದುರುಪಯೋಗ, ಸಿನೆಮಾದ ದುರುಪಯೋಗ, ರೇಡಿಯೊವಿನ ದುರುಪಯೋಗ,

ಎಲ್ಲ, ಮಗುವಿನ ಸುತ್ತಲೂ ಕಶ್ಮಲ, ಕಸ, ಅಲಗು, ವಿಷು ತುಂಬಾ ಆಕರ್ಷ ಣೀಯ ರೀತಿಯಲ್ಲಿ ಚದರುತ್ತಿವೆ. ಕಾಮುಕತೆ ಬೆಳೆಸುವ ಪುಸ್ತಕಗಳನ್ನು ಬರೆಯುವವರೂ, ನಾಚಿಕೆ ಇಲ್ಲದೆ ಅವನ್ನು ಬಹಿರಂಗವಾಗಿ ತಮ್ಮ ಅಂಗಡಿಗ ಳಲ್ಲಿ ಪ್ರದರ್ಶಿಸಿ ಮಾರಾಟ ಮಾಡಿ ಹಣ ಸಂಪಾದಿಸುವವರೂ, ತಮಗೆ ಮಕ್ಕಳಿರುವವರೇ ಆಗಿರುತ್ತಾರೆ. ಇತರರ ಮಕ್ಕಳು ತಮ್ಮ ಪ್ರಕಟಣೆಗ ಳಿಂದ ಕೆಡಲಿ; ಆದರೆ ತಮ್ಮ ಮಕ್ಕಳು ಮಾತ್ರ ರಾವಣರಾಗರು ಎಂದು ಭ್ರಮಿಸುವವರೂ ಇರಬೇಕು. ಅಂತೂ ಮಕ್ಕಳಿಗೆ ನಾವು ಪುನಃ ಸರಿ ಯಾದ ಓದು ಮಾತ್ರ ಕೊಟ್ಟು, ಹೊಲಸು ಓದಿನಿಂದ ತಪ್ಪಿಸಿ, ಬೆಳೆಸಿದರೆ ಅವರು ಉತ್ತಮರಾದಾರು; ಅನ್ಯತಾ ಖಂಡಿತ ಅವರು ಕೆಡದಿರರು.

## ೩. ಅಮೃತ ವರ್ಗದ ಓದು.

ನಮಗೆ ಈಗ ಓದಲು ಸಿಕ್ಕುವ ವಿಷಯಗಳನ್ನು ನಾಲ್ಕು ವರ್ಗವಾಗಿ ವಿಂಗಡಿಸಬಹುದು. ಅಮೃತ, ಅನ್ನ, ಅಮಲು (ಮದ್ಯ), ಅಮೇಧ್ಯ ಎಂದು. ಅಮೃತಸಾದ, ಶಾಶ್ವತನಾದ, ಸತ್ಯನಾದ, ಆನಂದಮಯನಾದ ದೇವರ ವಿಚಾರ ವಿವರಿಸುವ, ಅವನನ್ನು ಹೊಂದಲು ದಾರಿ ತೋರಿಸುವ, ಅವನನ್ನೇ ಗುರಿಯಾಗಿ ಇಟ್ಟುಕೊಂಡು ಸಾಧನೆ ಬೆಳೆಸಿ ಆತ್ಮದ ಅಮರತ್ವದ ಅರಿವನ್ನು ಸಾಧಿಸಲಾಪ ವಿವರಗಳಿರುವ ಗ್ರಂಥಗಳೆಲ್ಲ ಅಮೃತ ವರ್ಗದವು. ವೇದಗಳು, ಉಪನಿಷತ್ತುಗಳು, ಭಗವದ್ಗೀತೆ, ಧರ್ಮಶಾಸ್ತ್ರ, ಮಹಾಭಾರತ, ರಾಮಾಯಣ, ಭಾಗವತ ಮುಂತಾದ ಪುರಾಣಗಳು, ಜೀವನ್ಮುಕ್ತರ, ಭಗ ವದ್‌ಭಕ್ತರ ಜೀವನಚರಿತ್ರೆ, ಅವರ ಸಾಧನೆಯ ವಿವರಣೆ, ಮತ್ತು ಬೋಧಾ ಮೃತ ಎಲ್ಲಾ ಈ ವರ್ಗದವು.

ಈ ಗ್ರಂಥಗಳ ಶಕ್ತಿ ಅಪಾರವಾದುದು; ಅತ್ಯಾಶ್ಚರ್ಯಕರವಾದುದು. ಅವುಗಳಲ್ಲಿರುವ ವಿಚಾರವು ಆದಿ ಅಂತ್ಯ ಇಲ್ಲದ ಪರಮಾತ್ಮನದ್ದು; ಅವನ ಅಂಶವೇ ಆಗಿದ್ದು ತಾನೂ ಅನಂತನೇ ಆದ ಜೀವಾತ್ಮನದ್ದು; ಮತ್ತು ಪರಮಾತ್ಮ ಜೀವಾತ್ಮರ ಒಳಗಿರುವ ಸಂಬಂಧದ್ದು. ಆದ್ದರಿಂದ ಅದು ಎಂದೆಂದಿಗೂ ನಿಜ ವಾಗಿರುವ ಶಾಶ್ವತವಾದ ಜ್ಞಾನವಾಗಿರಬೇಕಷ್ಟೆ? ವೇದ ವೇದಾಂತಗಳಲ್ಲಿರುವ ಜ್ಞಾನ ಈ ರೀತಿಯಿಂದ ಸನಾತನವಾದುದು. ಈ ಜ್ಞಾನವನ್ನು ಸುಲಭ

ರೀತಿಯಲ್ಲಿ ಬೋಧಿಸಿ ಮಾಡುವ ಭಗವದ್ಗೀತೆ, ಕಥಾರೂಪದಲ್ಲಿ ವಿವರಿಸುವ ರಾಮಾಯಣ, ಮಹಾಭಾರತ ಮಾನವನಿಗೆ ಎಂದೆಂದೂ ಬೇಕಾದುದೇ ಆಗಿ ಉಳಿದೀತು. ಆದುದರಿಂದಲೇ ಹಲವು ಸಾವಿರ ವರ್ಷಗಳ ಹಿಂದೆಯೇ ಬರೆದ ರಾಮಾಯಣ ಗ್ರಂಥವು, ನಮ್ಮ ಗಿರಿಗಳು ನದಿಗಳು ಇರುವ ವರೆಗೆ ಮಾನವ ಲೋಕದಲ್ಲಿ ಆದರಣೀಯವಾಗಿ ಉಳಿದೀತು ಎಂದು ಎದೆತಟ್ಟಿ ಹೇಳುವ ಧೈರ್ಯ ನಮ್ಮ ಪೂರ್ವಿಕರಿಗಿತ್ತು. ಮನು ಧರ್ಮಶಾಸ್ತ್ರದಲ್ಲಿರುವ ಮಾನವನಿಗೆ ಬೇಕಾದ ಹಿತವಚನಗಳು ಅವನಿಗೆ ಎಂದೆಂದೂ ದಿವ್ಯ ಔಷಧಪ್ರಾಯವಾದೀತು ಎಂದು ಸಾರುವ ಧೈರ್ಯ ಅವರಿಗೆ ಬಂತು. ಲೋಕದಲ್ಲೆಂದೆಂದೂ ನಡೆಯುವ ಧರ್ಮ ಅಧರ್ಮಗಳೊಳಗಿನ ಎದುರಾಟದ ವಿಚಾರ, ಎಲ್ಲರಿಗೂ ಬೇಕಾದ ಪುರುಷಾರ್ಥಗಳ ವಿಚಾರ, ಮಹಾಭಾರತದಲ್ಲಿರುವುದರಿಂದ ಅದರಲ್ಲಿ ಇಲ್ಲದ್ದು ಲೋಕದಲ್ಲಿ ಬೇರೆ ಇಲ್ಲ ಎಂದೂ ಹೇಳುವ ಸಾಹಸ ಅವರು ಮಾಡಿದರು.

ನಮ್ಮದು ಅದ್ಭುತವಾದ ವಿಜ್ಞಾನ ಯುಗ; ನಾವು ಈಗ ತಿಳಿಯುತ್ತಿರುವುದೆಲ್ಲ ಹೊಸತು; ನಮ್ಮಂತಹ ಬುದ್ಧಿವಂತರಿಲ್ಲ; ಎನ್ನುವ ಯಾವ ಈಗಿನ ಬರಿಹಗಾರನಿಗೂ ತನ್ನ ಜ್ಞಾನ, ತನ್ನ ಬರಹ, 50–100 ವರ್ಷ ಕೂಡ ಬಾಳೀತೆಂದು ಎದೆ ತಟ್ಟಿ ಹೇಳುವ ಧೈರ್ಯವಿದೆಯೇ? ವಿಶ್ವದಲ್ಲಿ ಅನಂತ ಬ್ರಹ್ಮಾಂಡಗಳಿವೆ, ನಮ್ಮ ಭೂಮಿಯಂತಹ ಅನಂತ ಸೃಷ್ಟಿಗಳಿವೆ, ಎಂದು ನಮ್ಮ "ಅಮೃತ" ವರ್ಗದ ಅದ್ಭುತ ಗ್ರಂಥಗಳಲ್ಲಿ ಎಂದೆಂದೋ ನಿಸ್ಸಂಶಯವಾಗಿ ಸಾರಿದರು. ಬರೀ 20 ವರ್ಷಗಳ ಮುಂಚಿನ ವರೆಗೂ ನಮ್ಮ ವೈಜ್ಞಾನಿಕರು ಇದು ತೀರಾ ಅಸಂಭವ; ಪ್ರತಿ ಒಂದು ನಕ್ಷತ್ರವೂ ಒಂದು ಸೂರ್ಯ ಮಂಡಲವಾಗಿದೆಯಾದರೂ ನಮ್ಮ ಭೂಲೋಕದಂತಹದ್ದು ಹಲವು ಬೇರೆ ಇರುವುದು ತೀರಾ ಅಸಾಧ್ಯ ಎಂದರು. ಆದರೆ ಅವರೇ ಈಗ ಅದು ಖಂಡಿತ ಸಾಧ್ಯ ಎನ್ನುತ್ತಾರೆ. ಆದರೆ ಅಲ್ಪಕ್ಕೂ ಅಸಂಖ್ಯಾತಕ್ಕೂ ಅದೆಷ್ಟು ಅಂತರ! ನಮ್ಮ ಅಮೃತ ಗ್ರಂಥಗಳು ಹಾಗಲ್ಲ. ಶಾಶ್ವತ ಜ್ಞಾನದಿಂದ ತುಂಬಿವೆ.

ಅಶಾಶ್ವತ ಓದಿಂದ ಕೆಡುಕಾದೀತು. ಒಂದು ಪುಸ್ತಕವು ಸಂಕ ಉಂಟೆಂದು ಹೇಳಿದಲ್ಲಿ ನಿಜಕ್ಕೂ ಈಗ ಇಲ್ಲದಿದ್ದರೆ, ರಸ್ತೆ ಸುರಕ್ಷಿತವಾದುದು, ಕಳ್ಳಕಾಕರ ಭಯವಿಲ್ಲ, ಎಂದಲ್ಲಿ ಅವರು ನಿಜಕ್ಕೂ ಈಗ ಇದ್ದರೆ, ಹೇಗೆ ನಮಗೆ ಕಷ್ಟ, ನಷ್ಟ, ನಾಶ ಕೂಡ ಉಂಟಾಗಬಹುದೊ, ಹಾಗೆಯೇ, ಅಶಾಶ್ವತ

ಜ್ಞಾನವಿರುವ ಓದು ಹಾನಿ ತರಬಹುದು. ಆದರೆ "ಅಮೃತ" ವರ್ಗದ ಗ್ರಂಥಗಳು ಚ್ಯುತಿ ಇಲ್ಲದ ಜ್ಞಾನವನ್ನು ಬೋಧಿಸುವುದರಿಂದ ಮನುಷ್ಯನಿಗೆ ಎಂದೂ ಕೆಡುಕನ್ನು ಉಂಟುಮಾಡಲಾರವು. ಅದಕ್ಕೆ ಬದಲಾಗಿ ಶಾಶ್ವತವಾದ ಸುಖವನ್ನು ಹೊಂದಲು ಸಹಾಯ ಮಾಡಿಯಾವು. ನಿಜವಾದ ಅರಿವು ಎಂದರೆ ಅವು ಬೋಧಿಸುವುದು ಮಾತ್ರವೇ ಆಗಿದೆ.

ಅಮೃತ ಗ್ರಂಥಗಳಲ್ಲಿನ ಜ್ಞಾನ ಚ್ಯುತಿ ಇಲ್ಲದ್ದು ಮಾತ್ರವಲ್ಲ; ಅದು ಅಪರಿಮಿತವೂ ಆಗಿದೆ. ಅಂದರೆ ಅದನ್ನು ಓದಿ ಎಲ್ಲಾ ಅರಿತು ಪುಸ್ತಕ ಬಿಸಾಡುವಂತಿಲ್ಲ. ಭಗವದ್ಗೀತೆಗೆ ಸಾವಿರಾರು ಟೀಕೆಗಳಿವೆ. ಇನ್ನೂ ಬರೆಯುತ್ತಿದ್ದಾರೆ. ಆದರೆ ಒಂದರಂತೆ ಇನ್ನೊಂದಿಲ್ಲ. ಅದರ ಸಂಪೂರ್ಣ ಅರ್ಥ ಗ್ರಹಿಸಬಲ್ಲ ಮಟ್ಟಕ್ಕೆ ಏರಿದವರು ಆ ಮೇಲೆ ಮನುಷ್ಯರಲ್ಲ; ದೇವರೇ ಆಗಿ ಬಿಡುತ್ತಾರೆ. ಆದರೆ ಜೀವನ್ಮುಕ್ತರಾಗುವ ವರೆಗೂ ಅದರಿಂದ ಅನುಭವ ಪಡೆಯುವಷ್ಟು ಅದರಲ್ಲಿ ಅಪಾರ ಭಂಡಾರವಿದೆ. ಮಹಾತ್ಮಾ ಗಾಂಧಿಯವರು ಅದರ ಮತ್ತು ಈಶಾವಾಸ್ಯ ಉಪನಿಷತ್ತಿನ ಭಾಗಗಳನ್ನು ಪ್ರತಿ ದಿನದ ಪ್ರಾರ್ಥನೆಯಲ್ಲಿ ಸೇರಿಸಿಕೊಂಡಿದ್ದರು. ಬ್ರಾಹ್ಮಣನು ಗುರುಕುಲದಲ್ಲಿ ವೇದಾಭ್ಯಾಸ ಮುಗಿಸಿ ಬಂದಿದ್ದರೂ, ಆಜೀವಕಾಲ ಪ್ರತಿ ದಿನ ವೇದದ ಓದನ್ನು ಮುಂದರಿಸಬೇಕು ಎಂದು ನಮಗೆ ಶಾಸ್ತ್ರ ವಿಧಿಸಿದುದು ಇದಕ್ಕೇ. ಭಗವದ್ಗೀತೆಯು, ಉಪನಿಷತ್ತುಗಳ ಒಂದೊಂದು ಶ್ಲೋಕವೂ ಹಲವು ಘಂಟೆಯ, ದಿನಗಳ, ವರ್ಷಗಳ, ಮನನಕ್ಕೆ ಯೋಗ್ಯವಾಗಿವೆ. ಹಾಗೆ ಮನನ ಮಾಡಿದವರಿಗೆ ಮಾತ್ರವೇ ಅವುಗಳ ಮಹತ್ವ, ಅವುಗಳ ತಿರುಳು ತಿಳಿಯುತ್ತದೆ. ಈ ಅಮೃತ ಗ್ರಂಥಗಳ ಶಾಸ್ತ್ರೀಯ ಓದಿನ ಕ್ರಮದ ಪ್ರಕಾರ ಒಂದು ಸಾರಿನ ಓದು ಮುಗಿದೊಡನೆ ಪುನಃ ಆರಂಭದ ಶ್ಲೋಕ ಓದಿ ಪುಸ್ತಕ ಮುಚ್ಚಬೇಕು. ಇದು ಎಷ್ಟು ಅರ್ಥಗರ್ಭಿತವಾಗಿದೆ!

ಅಮೃತ ಗ್ರಂಥಗಳಲ್ಲಿರುವುದು ಶಾಶ್ವತವಾದ, ಅಪಾರವಾದ ಜ್ಞಾನ ಮಾತ್ರವಲ್ಲ; ಓದಿದಷ್ಟು ಹೆಚ್ಚು ರುಚಿ ಕೊಡುವ ಅನಂತ ಸವಿಯುಳ್ಳ ಜ್ಞಾನ. ವೇದ ವೇದಾಂತಗಳ ತೀರಾ ಆಳವಾದ ಜ್ಞಾನವನ್ನು ಸಾಮಾನ್ಯರಿಗೂ ರುಚಿಕರವಾಗಿ ಮಾಡಲು ಕಥಾರೂಪದಲ್ಲಿ ಬರೆದ ರಾಮಾಯಣ ಮಹಾಭಾರತಗಳನ್ನು ಪ್ರತಿ ವರ್ಷ ಓದಿ ಆನಂದಪಡುವವರು ಲಕ್ಷಾಂತರ ಜನರಿದ್ದಾರೆ. ವರ್ಷಕ್ಕೊಮ್ಮೆ ಓದುವ ಅಭ್ಯಾಸ ಇಟ್ಟುಕೊಂಡವರಿಗೆ

ಕೂಡ, ಅವು ಹಳೆತಾಗಿ ರುಚಿ ಇಲ್ಲದ್ದಾಗಿ ತೋರುವುದೆಂತಿಲ್ಲ. ಕತೆ ಗೊತ್ತಿದ್ದುದೇ ಆದರೂ ಮುಖ್ಯ ಘಟನೆಗಳಿಗೆ ಆತುರದಿಂದ ಕಾದಿದ್ದು ಮುಂಚಿಗಿಂತ ಒಂದು ತೊಟ್ಟು ಹೆಚ್ಚು ಕಣ್ಣೀರು ಬರುವಂತೆ ಮಾಡುತ್ತವೆ. ಭಕ್ತರೂ ಮಹಾತ್ಮರೂ ಆರಂಭದಲ್ಲಿ ನಮ್ಮಂತೆಯೇ ಇದ್ದವರಾದರೂ ದೇವರೆಂಬ ಅಮೃತ ತುಂಬಿಸಿಕೊಂಡಮೇಲೆ ಬೋಧಿಸಿದ ಮಾತುಗಳೂ, ಹೀಗೆಯೇ ತುಂಬಾ ಚಿರ ರಸಮಯವಾಗಿ ಇರುತ್ತವೆ. ಶ್ರೀ ರಾಮಕೃಷ್ಣ ಪರಮಹಂಸರ ಉಪದೇಶಾಮೃತ, ತುಕಾರಾಮರ ಅಭಂಗಗಳು, ದಾಸರ ಪದಗಳು, ಶಿವ ಶರಣರ ವಚನಗಳು, ರುಚಿ ಕುಂದುವುದೆಂತಿಲ್ಲ.

ಈ ಗ್ರಂಥಗಳಲ್ಲಿ ಅಪಾರ ಸವಿ ಇದೆ ಸರಿ. ಆದರೆ ಅವು ಆರಂಭದಲ್ಲಿ ರುಚಿಸದೆ, ಪ್ರಯತ್ನಪೂರ್ವಕ ಯತ್ನಿಸುವವರಿಗೆ ಮಾತ್ರ ಗೋಚರವಾದೀತು. ಆ ಮೇಲೆ ಮಾತ್ರ ರುಚಿ ಬೆಳೆಯುತ್ತ ಹೋಗಿ ಕ್ರಮೇಣ ಮಹತ್ತಾದ ಆಕರ್ಷಣೆಯಾಗಿ ಪರಿಣಮಿಸೀತು. ಇನ್ಯಾವ ಸವಿಯೂ ಅದಕ್ಕೆ ಸರಿಯಲ್ಲದ್ದು ಎಂಬ ಅನುಭವ ಉಂಟಾದೀತು. ಇದೊಂದು ತರದ ಸವಿ ಮಾತ್ರವೇ ನಿಜವಾದ ಸವಿ ಎಂದಾದೀತು. ಅದಕ್ಕಾಗಿ ಮಾತ್ರವೇ ಹಾತೊರೆಯುವಂತಾದೀತು.

ಅಮೃತ ಗ್ರಂಥಗಳಿಗೆ ಈ ಅಪಾರ ಗುಣಗಳು ಮಾತ್ರವಲ್ಲ; ನಮಗೆ ಈ ಕಾಲದಲ್ಲಿ ಅತೀವ ಅವಶ್ಯಕವಾದ, ಇನ್ನೊಂದು ಮಹತ್ತಾದ ಗುಣವೂ ಇದೆ. ಪ್ರಕೃತದ ವಿಷಯಕ್ಕೆ ಅದು ತುಂಬಾ ಅಗತ್ಯವಾದುದು. ಅದೇನೆಂದರೆ, ಅವು ಪವಿತ್ರತೆಯ ನಿಧಿಗಳಾಗಿದ್ದು ಓದುಗರ ಶೀಲವನ್ನು ಶುದ್ಧಗೊಳಿಸುತ್ತಾ ಹೋಗಲಾಪವು. ಅವನ್ನು ಮನಃಪೂರ್ವಕವಾಗಿ ಓದುತ್ತಿರುವವನ ಯತ್ನದ ದಾಮಾಶೆಯಂತೆ ಅವನ ಮನಸ್ಸಿನ ಕೊಂಕು ನಾಶವಾದೀತು; ಬುದ್ಧಿ ತಿಳಿಯಾದೀತು; ಭಾವನೆ ಮೃದುವಾದೀತು; ದೇಹ, ಮನಸ್ಸು, ಬುದ್ಧಿಗಳಲ್ಲಿ ಏಕತ್ವ ಬಂದೀತು; ಹೃದಯ ವಿಶಾಲವಾದೀತು. ಅವನು ಎಲ್ಲ ರೀತಿಗಳಲ್ಲೂ ಉತ್ತಮನಾದಾನು.

ಉತ್ತರ ಹಿಂದುಸ್ಥಾನದ ಬಹಳ ಪ್ರಖ್ಯಾತ ಶ್ರೀ ರಾಮ ಭಕ್ತರಾದ ತುಳಸೀದಾಸರು, ರಾಮಾಯಣವನ್ನು ಸಾಮಾನ್ಯ ಜನರ ಪ್ರಯೋಜನಕ್ಕಾಗಿ ಹಿಂದೀ ಭಾಷೆಯಲ್ಲಿ ಬರೆದರು. ಆ ಮೇಲೆ ಅದು ಪ್ರತಿ ಹಳ್ಳಿಯಲ್ಲಿ, ಮನೆಯಲ್ಲಿ, ಜನರು ಭಕ್ತಿಯುಕ್ತವಾಗಿ ಓದುತ್ತಿರುವ ಗ್ರಂಥವಾಯಿತು. ಅದರಿಂದಾಗಿ ಜನರ ಶೀಲದ ಮೇಲೆ ಅದರ ಅದ್ವಿತೀಯವಾದ ಉತ್ತಮ ಪರಿ

ಣಾಮವನ್ನು ಎಷ್ಟು ಹೊಗಳಿದರೂ ಸಾಲದು; ಎಂದು ಒಬ್ಬ ಪಾಶ್ಚಾತ್ಯನು ವರ್ಣಿಸಿರುವನು. ಕೆಟ್ಟವರ ಸಂಗದಿಂದ ಮಕ್ಕಳು ಹಾಳಾಗುತ್ತಾರೆಂಬುದನ್ನು ತಂದೆ ತಾಯಿಗಳು ಚೆನ್ನಾಗಿ ಬಲ್ಲರು. ಅಂತೆಯೇ ಓದಿನ ಮೂಲಕ ಶ್ರೀ ರಾಮನಂತಹ ಅದ್ವಿತೀಯ ಶೀಲವಂತನ ಸತ್ಸಂಗದಿಂದ ಜನರು ತಮ್ಮ ನಡತೆಯನ್ನು ಉತ್ತಮವಾಗಿ ಬೆಳೆಸಿಕೊಳ್ಳುವುದೂ ಖಂಡಿತ ನಡೆಯುವ ಕೆಲಸವಾಗಿದೆ. ನಮ್ಮ ಮಕ್ಕಳಿಗೆ ಅದು ತಪ್ಪದೆ ಸಿಕ್ಕುವ ವ್ಯವಸ್ಥೆ ಮಾಡುವ.

ಮನುಷ್ಯನಿಗೆ ಶೀಲಕ್ಕಿಂತ ಉತ್ತಮ ಧನವಿಲ್ಲ. ವಿದ್ಯಾರ್ಥಿಗಳು ವಿಜ್ಞಾನ ತುಂಬಾ ಕಲಿಯಬಹುದು; ಪ್ರಜಾಧರ್ಮ ತುಂಬಾ ಓದಬಹುದು; ಬುದ್ಧಿವಂತಿಕೆ ಬೆಳೆಸಬಹುದು; ಆದರೆ ಶೀಲವಿಲ್ಲದಿದ್ದರೆ ತಮ್ಮ ಓದನ್ನು ತಮಗಿಂತ ಕಡಿಮೆ ಬಲ್ಲವರನ್ನು ಸುಲಿಯಲು ಉಪಯೋಗಿಸಿಯಾರು. ತಮ್ಮ ಓದು ಎಷ್ಟು ಹೆಚ್ಚೋ ಅಷ್ಟೇ ಪ್ರಬಲರಾದ ರಾಕ್ಷಸರಾದಾರು. ರಾಜ್ಯಭಾರ ಕ್ರಮದಲ್ಲಿ ಪ್ರಜಾಪ್ರಭುತ್ವ, ಕಾನೂನುಗಳ ವಿಪುಲತೆ, ಮೂಲಭೂತ ಹಕ್ಕುಗಳ ಉದ್ದುದ್ದ ಪಟ್ಟಿ, ಪ್ರತಿನಿಧಿಗಳ ಚುನಾವಣೆಯ ಸಮರ್ಪಕ ರೀತಿ, ಎಲ್ಲಾ ಮುಖ್ಯವಲ್ಲ. ಅಧಿಕಾರಿಗಳಲ್ಲಿ ಶೀಲವಿಲ್ಲದವರೇ ತುಂಬಿದ್ದರೆ ಅವರು ಪ್ರಜೆಗಳ ರಕ್ತಹೀರಿ ಬೆಳೆದಾರು. ಆದುದರಿಂದ ಶೀಲವೇ ಜನರಿಗೆ ಅತಿ ಮುಖ್ಯವಾದುದು. ಅದನ್ನು ಬೆಳೆಸಲು ಧರ್ಮಗ್ರಂಥಗಳ ಸಹಾಯವಿಲ್ಲದೆ ಆಗದು. ಆದರೆ ನಮ್ಮ ಸರಕಾರಕ್ಕೆ, ನಮ್ಮ ವಿದ್ಯಾಪೀಠಗಳಿಗೆ, ಅವು ಈಗ ಬೇಡವಾಗಿವೆ. ಆದುದರಿಂದಲೇ ದಿನದಿನಕ್ಕೆ ನಮ್ಮ ದೇಶದಲ್ಲಿ ಜೀವನ ಹಾಳಾಗುತ್ತಿದೆ. ಧರ್ಮದಲ್ಲಿ ತುಂಬಾ ವಿಶ್ವಾಸವಿರಬೇಕಾದ ಬ್ರಾಹ್ಮಣರಾದರೂ ಈ ಅಮೃತ ಗ್ರಂಥಗಳ ಸಹಾಯವನ್ನು ಆದಷ್ಟು ಹೆಚ್ಚಾಗಿ ಹೊಂದಿ ತಮ್ಮ ಮಕ್ಕಳ ಜನ್ಮ ಪಶುಪ್ರಾಯವಾಗದಂತೆ ರಕ್ಷಿಸುವುದು ಅತ್ಯವಶ್ಯಕ. ಮಾತ್ರವಲ್ಲ; ನಮಗೆಲ್ಲರಿಗೆ ಪ್ರಿಯವಾದ ನಮ್ಮ ಹಿಂದೂ ಸಮಾಜವು ಉತ್ತಮ ರೀತಿಯಲ್ಲಿ ಉಳಕೊಂಡಿರಬೇಕಾದರೆ ನಮ್ಮ ಬ್ರಾಹ್ಮಣ್ಯವನ್ನು ನಾವು ಹೀಗೆ ರಕ್ಷಿಸಿಕೊಂಡಿರುವುದು ಅತ್ಯಗತ್ಯ.

ಬ್ರಾಹ್ಮಣಂ ತು ಸ್ವಧರ್ಮಸ್ಥಂ ದೃಷ್ಟ್ವಾ ಬಿಭ್ಯತಿ ಚೇತರೇ ।
ಸ್ವಧರ್ಮಂ ಜಾನುತಿಷ್ಠಂತಿ ಕೃತ್ಯಂ ಸರ್ವಂ ಚ ಕುರ್ವತೇ ॥ ಶುಕ್ರನೀತಿ ॥

ಚಾತುರ್ವರ್ಣ್ಯಂ ಚತುರಾಶ್ರಮ ಧರ್ಮಾಃ ।
ಸರ್ವೇನಸ್ಯು ಬ್ರಾಹ್ಮಣಾನಾಂ ವಿನಾಶಾತ್ ॥ ಮಹಾಭಾರತ ॥

## ೪. ಅನ್ನ ವರ್ಗದ ಓದು.

ಎರಡನೆಯ ತರದ ಓದಿಗೆ "ಅನ್ನ" ಎಂತ ಹೆಸರು ಕೊಟ್ಟೆ. ಏಕೆಂದರೆ ಅದರಲ್ಲಿರುವ ಓದು ಬಹು ಮಟ್ಟಿಗೆ ಹೊಟ್ಟೆ ಪಾಡಿಗೆ ಬೇಕಾದ ಲೌಕಿಕ ವಿಷಯಗಳ ಜ್ಞಾನ ಮತ್ತು ಮಾಹಿತ್ಯಗಳ ಸಾರಾಂಶ. ಮಗ್ಗಿ ಕೋಷ್ಟಕ, ಭೂವಿವರಣೆ, ಚರಿತ್ರೆ, ರಸಾಯನ ಶಾಸ್ತ್ರ, ಯಂತ್ರಗಳ ಜ್ಞಾನ, ವೈದ್ಯ ಶಾಸ್ತ್ರ, ಖಗೋಳ ಶಾಸ್ತ್ರ, ಅರ್ಥ ಶಾಸ್ತ್ರ, ಮುಂತಾದವೆಲ್ಲ ಈ ವರ್ಗದಲ್ಲಿ ಬರುತ್ತವೆ. ಹಲವಾರು ಬುದ್ಧಿವಂತರ, ಹಲವಾರು ಜೀವನಗಳ, ಲೌಕಿಕ ಅನುಭವಗಳ ಸಾರಾಂಶ ರೂಪುಗೊಂಡು, ಆ ಮೇಲೆ ಸಾವಿರಾರು ಜನರಿಂದ ಪರೀಕ್ಷಿಸಲ್ಪಟ್ಟು ನಿಜವೆಂದು ಪ್ರಶಸ್ತಿ ಪಡೆದು, ನಮ್ಮ ಪ್ರಯೋಜನಕ್ಕಾಗಿ ಜನಾಂಗದ ಪಿತ್ರಾರ್ಜಿತವಾಗಿ ಬಂದ ಅನುಭವದ ನಿಧಿ ಇದು.

ಆದರೆ ಇದರಲ್ಲಿಯ ಜ್ಞಾನವು ಅಮೃತ ವರ್ಗದ ಗ್ರಂಥಗಳಲ್ಲಿದ್ದವುಗ ಳಂತೆ ಶಾಶ್ವತ ಮಟ್ಟದವಲ್ಲ. ಉದಾಹರಣೆಗಾಗಿ ಇಪ್ಪತ್ತು ವರ್ಷಗಳ ಹಿಂದೆ ಶಾಸ್ತ್ರಜ್ಞರು ನಂಬುತ್ತಿದ್ದ ಅರ್ಥ ಶಾಸ್ತ್ರದ ಎಷ್ಟೋ ತತ್ವಗಳು ಈಗ ಮೂಲೆಗೆ ಬಿದ್ದಿವೆ. ಈಗ ವಿದ್ಯುಚ್ಛಕ್ತಿಯ ವಿಚಾರ ತುಂಬಾ ಕೆಲಸ ನಡೆಯುತ್ತಿದೆ ಯಾದರೂ, ಅದು ಏನು ಎನ್ನುವ ಬಗ್ಗೆ ಇನ್ನೂ ಸ್ಪಷ್ಟ ಜ್ಞಾನವಿಲ್ಲದಾಗಿದೆ. ಜನರಿಗೆ ಅತ್ಯುತ್ತಮವಾದ ರಾಜ್ಯಭಾರ ಕ್ರಮ ಯಾವುದು ಎಂಬ ಬಗ್ಗೆ ಹಲವು ಅಭಿಪ್ರಾಯಗಳಿವೆ. ಹೀಗೆ ಈ ಜ್ಞಾನ ಅಸಂಪೂರ್ಣ ಮತ್ತು ತಿದ್ದ ಲ್ಪಡುತ್ತಿರುವಂತಹದು. ಸತ್ಯ ಅಸತ್ಯ ಮಿಶ್ರವಾದದ್ದು.

ಈ "ಅನ್ನ" ವರ್ಗದ ಓದು ಆರಂಭಿಸುವವರಿಗೆ ರುಚಿಸದು. ಓದಲು ಶ್ರಮ ಬೇಕು. ಸ್ವಲ್ಪ ಆಳಕ್ಕೆ ಹೋಗಲಿಕ್ಕೂ ಮನನಕ್ಕೂ ಅದರಲ್ಲಿ ಆಸ್ಪದ ವಿದೆ. ಬುದ್ಧಿಯನ್ನೂ ಚುರುಕು ಮಾಡುವ ಶಕ್ತಿ ಇದೆ. ಆದರೆ ಈ ಗುಣ ಗಳ್ಯಾವುವೂ ಅಮೃತ ಓದುವಿನಲ್ಲಿದ್ದಷ್ಟಿಲ್ಲ. ಎಷ್ಟೋ ಕಡಿಮೆ ತರದಲ್ಲಿ ಮಾತ್ರ ಇವೆ. ಈ ಓದಿನಿಂದಲೂ ಬುದ್ಧಿ ವಿಶಾಲವಾಗುತ್ತದೆ. ಆದರೆ ಬಹು ಮಟ್ಟಿಗೆ ಕಲಿತ ಜ್ಞಾನದ ಭಾಗದಲ್ಲಿ ಮಾತ್ರ; ಜೀವನದ ಎಲ್ಲಾ ಭಾಗ ಗಳಲ್ಲಲ್ಲ. ಪಾಶ್ಚಾತ್ಯ ವಿದ್ಯಾ ಕ್ರಮದಲ್ಲಿ ಜೀವನವು ಒಂದು ಕ್ರಿಕೆಟ್ ಆಟದ ರಂಗದಂತೆ. ಆದ್ದರಿಂದ ಕ್ರಿಕೆಟ್ ಆಟದಲ್ಲಿ ನ್ಯಾಯಪರತೆಯಿಂದ ಮೋಸ ಮಾಡದೆ, ಆಟ ಆಡಲು ಮಕ್ಕಳಿಗೆ ಕಲಿಸಿದರೆ, ಅವು ತಮ್ಮ ಜೀವನದ ಎಲ್ಲಾ ರಂಗಗಳಲ್ಲೂ ನ್ಯಾಯಪರತೆ ತೋರಿಸಿಯಾವು ಎಂದು ಅಲ್ಲಿಯವರು

ನಂಬಿದ್ದರು. ಆದರೆ ಹಾಗೆ ತರಬೇತಿ ಹೊಂದಿದವರು ದೊಡ್ಡದಾದ ಮೇಲೆ ವ್ಯಾಪ್ಯಾರದಲ್ಲಿ, ರಾಜಕೀಯ ರಂಗದಲ್ಲಿ, ಮುಂತಾಗಿ ಯಾವ ನ್ಯಾಯಪರತೆಯನ್ನೂ ತೋರದಿರುವುದು ಎಲ್ಲೆಲ್ಲೂ ಕಂಡ ಮೇಲೆ ಈ ಲೌಕಿಕ ರಂಗದಲ್ಲಿ ಶೀಲ ಬೆಳಸುವುದು ಕಷ್ಟ ಎಂದು ಮನಗಂಡರು. ಶಾಲೆಯಲ್ಲಿ ಶುಚಿತ್ವಕ್ಕೆ ಇನಾಮು ಪಡೆದ ಹುಡುಗ ಮನೆಯಲ್ಲಿ ತನ್ನ ಕೋಣೆಯನ್ನು ತುಂಬಾ ಅಶುಚಿಯಾಗಿ ಇಟ್ಟುಕೊಳ್ಳುತ್ತಿದ್ದುದು ನನ್ನ ಸ್ನೇಹಿತರೊಬ್ಬರ ಅನುಭವ. ಇದಕ್ಕೆಲ್ಲಾ ಕಾರಣವೇನೆಂದರೆ ಈ ಲೌಕಿಕ ಓದಿನಲ್ಲಿ ಜೀವನವನ್ನು ಕೇಂದ್ರೀಕರಿಸುವ ಶಕ್ತಿ ಇಲ್ಲ. ಆದರೆ ಧಾರ್ಮಿಕ ಗ್ರಂಥಗಳ ಸಹಾಯದಿಂದ ಗಳಿಸಬಹುದಾದ ಆತ್ಮ ಶಕ್ತಿಯು ಹಾಗಲ್ಲ. ಆ ಶಕ್ತಿಯ ಆಧಾರದಿಂದ ಎಲ್ಲಾ ಇತರ ನಮ್ಮ ಶಕ್ತಿಗಳೂ ಬೆಳಗುವುದರಿಂದ, ಅದು ಬೆಳೆದಂತೆ, ಅದರ ಬೆಳೆಯುತ್ತಿರುವ ಪ್ರಭಾವವು ಅವನ ಪ್ರತಿ ಕಾರ್ಯರಂಗದಲ್ಲೂ ಅವನನ್ನು ಶ್ರೇಷ್ಠವಾದ ಮಟ್ಟಕ್ಕೆ ಪ್ರೇರಿಸೀತು.

ಈ "ಅನ್ನ" ಭಾಗದ ಓದನ್ನು ವಿದ್ಯಾರ್ಥಿಗಳು "ವಿದ್ಯಾ ನಿಲಯಗಳಲ್ಲಿ" ನಡೆಸುತ್ತಾರೆ. "ವಿದ್ಯೆ" ಮನುಷ್ಯನ ಹಿರಿಮೆಯ ಲಕ್ಷಣ. ಆದ್ದರಿಂದ ಈ ವಿದ್ಯೆ ಅವರನ್ನು ಸಂಸ್ಕೃತರನ್ನಾಗಿಯೂ ಶೀಲವಂತರನ್ನಾಗಿಯೂ ಖಂಡಿತ ಮಾಡೀತು ಎಂಬ ಭಾವನೆ ಜನಸಾಮಾನ್ಯರಲ್ಲಿ, ಅಧ್ಯಾಪಕರಲ್ಲಿ, ನಮ್ಮ ಸರಕಾರದಲ್ಲಿ, ತುಂಬಾ ಇದೆ. ಆದರೆ ನಿಜತ್ವವೇನೆಂದರೆ ಈ ಓದು ಆ ಕೆಲಸ ಖಂಡಿತ ಮಾಡಲಾರದು. ಶೀಲ ಬೆಳೆಸುವ ಶಕ್ತಿ ಅದರಲ್ಲಿಲ್ಲ. ಹುಡುಗನು ಸ್ವಾಭಾವಿಕವಾಗಿ ಒಳ್ಳೆಯವನಾಗಿದ್ದರೆ ವಿಶ್ವವಿದ್ಯಾಲಯದ ಓದು ಮುಗಿಸಿದಾಗಲೂ ಒಳ್ಳೆಯವನಾಗಿ ಉಳಿಯಬಹುದು. ಕುಹಕಿಯೂ, ಸ್ವಾರ್ಥಿಯೂ, ಸಂಕೋಚ ಭಾವದವನೂ, ಕಾಮುಕನೂ ಆಗಿದ್ದರೆ, ಓದು ಮುಗಿಸಿ ಮುಂಚಿಗಿಂತ ಹೆಚ್ಚು ಬಲ್ಲ, ಆದುದರಿಂದ ಸಮಾಜಕ್ಕೆ ಮುಂಚಿಗಿಂತ ಹೆಚ್ಚು ಅಪಾಯಕರನಾದ, ಮನುಷ್ಯನಾಗ್ಯಾನು. ಅವನ ಲೌಕಿಕ ವಿಷಯ ಜ್ಞಾನ ಹೆಚ್ಚಾದೀತು. ಆದರೆ ಅವನ ಮನಸ್ಸನ್ನು ಈ ಓದು ಮೃದು ಮಾಡಲಾರದು. ಅವನಲ್ಲಿ ತಾನು ಪದವೀಧರನೆಂಬ ಜಂಬ ತುಂಬೀತು. ಧನದ ಆಸೆ ಹೆಚ್ಚೀತು. ತನ್ನ ಯೋಗ್ಯತೆಯ ಮಟ್ಟ ಮೀರಿದ ಅಭಿಲಾಷೆಗಳು ಅವನಲ್ಲಿ ಬೆಳೆದೀತು.

ಈ ಅನ್ನ ವರ್ಗದ ಓದಿಂದ ಜನರ ಶೀಲವು ವೃದ್ಧಿಯಾದೀತೆಂಬ ಭ್ರಾಂತು ಸಾಮಾನ್ಯ ಜನರಲ್ಲಿ ಮಾತ್ರವಲ್ಲ; ನಮ್ಮ ರಾಜಕೀಯ ಮುಖಂಡ

ರಲ್ಲೂ ತುಂಬಾ ಇರುವುದರಿಂದಲೇ ನಮ್ಮ ಶಾಲೆಗಳಲ್ಲಿ ಅದು ಮಾತ್ರವೇ ಸಾಕು ಎಂದು ಅವರು ಇತ್ಯರ್ಥ ಮಾಡಿದ್ದಾರೆ.

ಇವರ ಭ್ರಾಂತಿನ ಫಲವಾಗಿ ಗುರು ಎಂದರೆ ಮುಂಚೆ ಅತ್ಯುತ್ತಮ ಭಾವನೆ ಇದ್ದ ನಮ್ಮ ದೇಶದಲ್ಲಿ ಒಂದು ಕಡೆಯಲ್ಲಿ ವಿದ್ಯಾರ್ಥಿಗಳು ಉಪಾಧ್ಯಾಯರನ್ನು ಕೊಂದರು. ಹಲವು ಕಡೆಗಳಲ್ಲಿ ಅವರು ಪರೀಕ್ಷೆಯನ್ನು ಭಂಗ ಮಾಡಿದರು. ವಿದ್ಯಾರ್ಥಿನಿಯರನ್ನು ಹಿಂಸಿಸಿದರು; ಅಪಮಾನ ಮಾಡಿದರು. ಮುಷ್ಕರ ಹಿಡಿದು ಅಥವಾ ತಮ್ಮ ಅಸಾಧ್ಯ ವರ್ತನೆಯಿಂದ ವಿದ್ಯಾಲಯಗಳನ್ನು ತತ್ಕಾಲಕ್ಕೆ ಮುಚ್ಚಿಸಿದರು. ಆದರೂ ಸರಕಾರದ ಭ್ರಾಂತು ಹೋಗಲೊಲ್ಲದು! ಏಕೆಂದರೆ ಅದರಲ್ಲಿರುವವರಿಗೆ "ಅಮೃತ" ವರ್ಗದ ಗ್ರಂಥಗಳಲ್ಲಿ ಶ್ರದ್ಧೆಯೇ ಇಲ್ಲವಾಗಿದೆ.

ಇದಕ್ಕೆ ಬದಲಾಗಿ, ಧರ್ಮವನ್ನು ಶೀಲಕ್ಕೆ ತಳಹದಿಯಾಗಿಟ್ಟು ಬೆಳೆಸಿದ ನಮ್ಮ ಮುಂಚಿನ ವಿದ್ಯಾ ಪೀಠಗಳ ಚರಿತ್ರೆ ನೋಡಿರಿ. ಏಳು ನೂರು ವರ್ಷ ಕಾಲ ತುಂಬಾ ಯಶಸ್ವಿಯಾಗಿ, ಜಗದ್ವಿಖ್ಯಾತವಾಗಿ, ಸಾವಿರಾರು ವಿದ್ಯಾರ್ಥಿಗಳಿಂದ ತುಂಬಿ ನಡೆಯುತ್ತಿದ್ದ ನಳಂದ ವಿಶ್ವವಿದ್ಯಾಲಯದಲ್ಲಿ ಒಂದೇ ಒಂದು ವಿದ್ಯಾರ್ಥಿಯ ಅವಿಧೇಯತೆಯ ದೃಷ್ಟಾಂತ ಇರಲಿಲ್ಲ ಎಂದು ಹಲವು ವರ್ಷಗಳ ಹಿಂದೆ ನಾನು ಓದಿದ ನೆನಪು. ಆದರೆ ಪಾಶ್ಚಾತ್ಯರ ಕ್ರಮಕ್ಕೆ ಪರಿಪೂರ್ಣ ಮನಸೋತ ನಮ್ಮ ರಾಜಕೀಯ ಮುಂದಾಳುಗಳಿಗೆ ನಮ್ಮ ಪವಿತ್ರ ಪಿತ್ರಾರ್ಜಿತ ಕ್ರಮವಾದ "ಅಮೃತ" ವರ್ಗದ ಓದನ್ನು ಉಪಯೋಗಿಸುವ ದಾರಿ ಅಸಹನೀಯವಾಗಿದೆ.

ಪಾಶ್ಚಾತ್ಯ ದೇಶಗಳಲ್ಲಿ ಅಲ್ಲಿನ ವಿಜ್ಞಾನಿಗಳ ಪ್ರಚಂಡ ಸಂಶೋಧನೆಗಳ ಪರಿಣಾಮವಾಗಿ ಈ "ಅನ್ನ" ಭಾಗದ ವಿದ್ಯೆಯು ಅತ್ಯದ್ಭುತ ಶಕ್ತಿ ಪ್ರದರ್ಶಿಸಿ ಜನರನ್ನು ಬೆರಗು ಮಾಡುವಷ್ಟು ಪ್ರಶಸ್ತಿ ಪಡೆದು, ತಾನು ಮಾತ್ರವೇ "ವಿದ್ಯೆ" ಎನ್ನುವಷ್ಟು ಜಂಬದ ಮಟ್ಟಕ್ಕೆ ಏರಿದೆ. ಮಾನವನಿಗೆ ಹೊಟ್ಟೆ ಇರುವಷ್ಟರ ವರೆಗೂ ತಾನು ಅಪಹರಿಸಿದ ಈ ಪ್ರಥಮ ಸ್ಥಾನ ಅದು ಬಿಟ್ಟು ಕೊಡುವಂತಿಲ್ಲ. ಮಾತ್ರವಲ್ಲ ಮುಖ್ಯವಾಗಿ ಮಾನವನ ಹಸಿವು ತಣಿಸಲು ಹುಟ್ಟಿದ ಈ ವಿದ್ಯೆ ನಮ್ಮ ಹಸಿವು ತಣಿಸುವುದು ಮಾತ್ರವಲ್ಲ; ನಮ್ಮ ಬೆರಳು ಕೊಟ್ಟರೆ ನಮ್ಮನ್ನೆ ನುಂಗುವಷ್ಟು ಹಸಿವನ್ನು ಬೆಳೆಸಿದೆ. ತಾನು ಏಕೆಲ್ಲ ಹೀಗೆ ಬೆಳೆಯಬೇಕೆಂಬುದೇ ಅದಕ್ಕೆ ತಿಳಿಯದಾಗಿದೆ. ಅದರ ಗೊಂದಲಕ್ಕೆ ಸಿಕ್ಕಿದ

ವನಿಗೆ ಓದಿನ ಮಿತಿಇಲ್ಲದ ಸುರಿಮಳೆಯೇ ಗತಿ. ತನಗೆ ಆತ್ಮವೆಂಬುದೊಂದು ಇದೆಯಂತೆ; ಅದು ನಿಜವೆ? ಎಂದು ಯೋಚಿಸಲಿಕ್ಕೆ ಸ್ವಲ್ಪವೂ ಬಿಡು ಇಲ್ಲವಾಗುತ್ತದೆ. ಕ್ರಮೇಣ ಆ ಅನ್ನದ ಓದಲ್ಲಿ ಸಂಪೂರ್ಣ ಮುಳುಗಿ ಅವನ ಜೀವನ ಅಂತ್ಯವಾಗುತ್ತದೆ.

ನ್ಯಾಯವನ್ನು ತೀರ್ಮಾನಿಸಲಿಕ್ಕೆಂದು ಉಂಟಾದ ಕೋರ್ಟುಗಳಲ್ಲಿ, ನ್ಯಾಯದ ದಾರಿ ಕಾಣಲಿಕ್ಕೆಂದು ಅಪರಿಮಿತವಾಗಿ ಬೆಳೆಸಿದ ಸಹಾಯಕ ಪುಸ್ತಕಗಳಿಂದಾಗಿ, ವಕೀಲರಿಗೂ ನ್ಯಾಯಾಧೀಶರಿಗೂ ನ್ಯಾಯದ ದಾರಿಯೇ ಸಂಪೂರ್ಣ ಕಣ್ಮರೆಯಾಗಿಬಿಟ್ಟಿದೆ! ವೈದ್ಯಕೀಯ ಜ್ಞಾನದ ಅಪರಿಮಿತ ಬೆಳವಣಿಗೆಯಿಂದಾಗಿ ಚಿಕಿತ್ಸೆಯ ಸುಲಭ ಕ್ರಮಗಳ ಜ್ಞಾನ ಸಂಪೂರ್ಣ ಮರೆತಂತಾಗಿದೆ. ಈ ಅಪರಿಮಿತವಾದ ಹೊಸ ಜ್ಞಾನವನ್ನು ದೀರ್ಘವಾಗಿ ಓದಿದವರೂ ಅವರ ಚಿಕಿತ್ಸಾಕ್ರಮಗಳೂ ಜನಸಾಮಾನ್ಯರಿಗೆ ಏನೂ ದಕ್ಕಲಾರದಷ್ಟು ತುಟ್ಟಿಯಾಗಿಬಿಟ್ಟಿವೆ. ವಿಜ್ಞಾನವು ದಿನದಿನಕ್ಕೂ ಬೆಳೆಯುತ್ತ, ಕವಲೊಡೆಯುತ್ತ, ಪ್ರತಿ ವಾರಕ್ಕೂ ಬಂಡಿಗಟ್ಟಲೆ ಹೊಸ ಜ್ಞಾನವಿಸ್ತಾರದ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಮನುಷ್ಯನ ಅನುಕೂಲತೆಗೆಂದು ಆರಂಭವಾದ ಅದು ಅವನನ್ನು ಭೂಲೋಕದಿಂದ ನಿರ್ಮೂಲ ಮಾಡುವಷ್ಟು ಈಗ ಬೆಳೆದಿದೆ. ಆದರೂ ಅದರ ಅಪಾರ ಹಸಿವಿಂದಾಗಿ ವಿಜ್ಞಾನ ಇನ್ನೂ ಸಾಲದು ಎಂದು ಮನುಷ್ಯ ಹಂಬಲಿಸುತ್ತಿದ್ದಾನೆ! ಜೀವನದ ಮುಖ್ಯಗುರಿ ಮರೆತಿದ್ದಾನೆ.

ಆದರೆ ಮನುಷ್ಯ ಜೀವನ, ಬರೀ ದೇಹದ ಪೋಷಣೆ ಬಗ್ಗೆ ಅಲ್ಲ ಎಂಬುದನ್ನು ಬ್ರಾಹ್ಮಣರಾದರೂ ನೆನಪು ಬಿಡಕೂಡದು. ನಮಗೆ ಶಾಸ್ತ್ರ ಹೇಳಿದ್ದು ಅತೀವ ಸರಳವಾದ, ಸುಲಭವಾದ ಜೀವನ. ಲೌಕಿಕ ಆಡಂಬರಗಳಲ್ಲ. ಅದು ನೆನಪಲ್ಲಿಟ್ಟುಕೊಂಡು ವರ್ತಿಸಿದರೆ ಮಾತ್ರ ಈಗಿನ "ಅನ್ನ" ಭಾಗದಸುರಿಮಳೆಯಿಂದ, ಆ ವಿದ್ಯೆಯಲ್ಲಿ ಕಂತಿ ಸಾಯುವ ಕೆಟ್ಟ ಯೋಗದಿಂದ, ತಪ್ಪಿಸಿ ಕೊಳ್ಳಬಹುದು.

## ೫. ಅಮಲು ವರ್ಗದ ಓದು

ಮೂರನೆಯ ವರ್ಗದ ಓದನ್ನು "ಅಮಲು" ಅಥವಾ "ಮದ್ಯ" ಎಂದು ಹೆಸರಿಸಿರುವೆ. ಅಮಲು ಪದಾರ್ಥಗಳಾದ ಹೆಂಡ, ಶರಾಬು, ಬ್ರೇಂಡಿ

ಮುಂತಾದವುಗಳನ್ನು ಅಭ್ಯಾಸ ಮಾಡಿಬಿಟ್ಟರೆ ಆಮೇಲೆ ಅವಕ್ಕಾಗಿ ಆಗಾಗ ಮನಸ್ಸು ತುಂಬಾ ಆಸೆಪಡುತ್ತದೆ. ಆದರೆ ಅವುಗಳಲ್ಲಿ ನಾಲಗೆಗೆ ರುಚಿ ಕೊಡುವ, ದೇಹಕ್ಕೆ ಶಕ್ತಿ ಕೊಡುವ, ದೇಹದಲ್ಲಿ ರಕ್ತ ತುಂಬಿಸುವ, ಪ್ರಯೋಜನಕರವಾದ ವಸ್ತು ಏನೂ ಇಲ್ಲ. ಅವುಗಳ ಮುಖ್ಯ ಲಕ್ಷಣವೇನೆಂದರೆ ನಮ್ಮ ಬುದ್ಧಿಯನ್ನು ಸ್ತಬ್ಧ ಮಾಡಿ ಮನಸ್ಸಿನ ಮೇಲೆ ಅದು ಹಾಕುವ ಲಗಾಮನ್ನು ಸಂಪೂರ್ಣ ಸಡಿಲಿಸಿ, ಮನಸ್ಸು ಬೇಕಾದಂತೆ ಹರಿಯಲಿಕ್ಕೆ ಆಸ್ಪದ ಉಂಟುಮಾಡುವುದು. ತನ್ಮೂಲಕ ಕುಡುಕರು ತಮಗೆ ತಾವೇ ಸ್ವರಾಜ್ಯ ಪಡೆದಂತೆ ಭಾವಿಸಿ ನೆಮ್ಮದಿ ಪಡುತ್ತಾರೆ. ಆದರೆ ಬುದ್ಧಿಯ ಯಜಮಾನತ್ವ ಮಾತ್ರವೇ ಮಾನವನ ಹೆಗ್ಗಳಿಕೆಯಾದ್ದರಿಂದ, ಅದರ ಆಡಳಿತೆ ಬೇಡವೆನ್ನುವುದು ಪುನಃ ಪ್ರಾಣಿಮಟ್ಟಕ್ಕಿಳಿಯುವ ಯತ್ನವಾಯಿತು!

"ಅಮಲು" ವರ್ಗದ ಓದಲ್ಲೂ ಈ ಗುಣಗಳನ್ನು ಕಾಣಬಹುದು. ಬಹುಮಟ್ಟಿನ ಚಿಕ್ಕ ಕತೆಗಳು, ದೊಡ್ಡ ಕತೆಗಳು, ಪತ್ತೇದಾರೀ ಕತೆಗಳು, ಕಾದಂಬರಿಗಳು, ಹರಟೆಗಳು, ವರ್ತಮಾನ ಪತ್ರಿಕೆಯ ಅನೇಕ ಭಾಗಗಳು, ಓದುಗನಿಗೆ ಪ್ರಯೋಜನ ಬರುವ ಯಾವ ತಿರುಳೂ ಇಲ್ಲದವು ಆಗಿವೆ. ಅವು ಬುದ್ಧಿಗೆ ಕೆಲಸ ಕೊಟ್ಟು ತನ್ಮೂಲಕ ಆಲೋಚನಾ ಶಕ್ತಿ ಬೆಳೆಸವು. ಕತೆಗಳಲ್ಲಿ ಬರುವ ವಿಚಾರಗಳು ಅನ್ನದ ಓದಿನಂತೆ ಹಲವರ ಪ್ರಯೋಜನಕಾರೀ ಮಾಹಿತ್ಯವಲ್ಲ; ಬರೀ ಬರೆದವನ ಅಲ್ಪಸ್ವಲ್ಪ ಸ್ವಂತ ಅನುಭವದೊಡನೆ ವಿಪರೀತ ಕಲ್ಪಿತ ಭಾವನೆಗಳನ್ನು ಮಿಶ್ರಮಾಡಿ ರಚಿಸಿದವಾಗಿರುತ್ತವೆ. ಯಾರಿಂದಲೂ ಪರೀಕ್ಷಿಸಲ್ಪಟ್ಟು ಅನುಮೋದಿಸಲ್ಪಟ್ಟವಲ್ಲ. ಬಹುಮಟ್ಟಿನವುಗಳಲ್ಲಿ, ಓದುಗನ ಮುಂದಿನ ಜೀವನಕ್ಕೆ ಪ್ರಯೋಜನವಾದೀತೆಂದು ಸಂಗ್ರಹಿಸಿ ಜೋಪಾನ ಮಾಡಿ ಇಡಲು ಬೇಕಾದ ಯೋಗ್ಯತೆ ಅವುಗಳಲ್ಲಿಲ್ಲ. ಪತ್ತೇದಾರೀ ಕತೆ ನೂರಾರು ಓದಿದ ಹುಡುಗ ಕೂಡ ಆ ದಾರಿಯಲ್ಲಿ ಸಾಮಾಜಕ್ಕೆ ಸೇವೆ ಮಾಡಿರುವುದು ಕಾಣೆವು. ಸಮಯದ ಮತ್ತು ಜೀವನದ ಬೆಲೆ ತಿಳಿದವರಿಗೆ ಕತೆಗಳು ನಿಷ್ಪ್ರಯೋಜನ. ಅವಲ್ಲಿ ತುಂಬಾ ಸಮಯ ಕಳೆಯುವವರೂ ಕೂಡ ಅವಕ್ಕೆ ಕಟ್ಟುವ ಬೆಲೆ ಎಂದರೆ ಪುಸ್ತಕ ಓದುವುದು, ಬಿಸಾಡುವುದು, ನೆನಪು ಬಿಡುವುದು.

ಮದ್ಯಪಾನ ಅಭ್ಯಾಸ ಮಾಡಿದವನಿಗೆ ಅದು ಆಗಾಗ ಬೇಕಾಗುವಂತೆ, ಈ ತರದ ಓದು ಮನಸ್ಸಿನ ಸ್ವಭಾವಕ್ಕೆ ಅಗತ್ಯವಾಗಿಬಿಡುತ್ತದೆ. ಉತ್ತಮ

ಕೆಲಸವಿದ್ದಾಗ ಕೂಡ ಅದರಿಂದ ವಿಮುಖನನ್ನಾಗಿ ಮಾಡಿ ಆಕರ್ಷಿ ಸುತ್ತದೆ. ದೇವಾಲಯಕ್ಕೆ ಹೋದಾಗ ಕೂಡ ಅಲ್ಲಿ ಕುಳಿತು, ಪತ್ರಿಕೆ ಓದ ಬೇಕೆನ್ನಿಸುತ್ತದೆ! ಕಾಲೇಜಲ್ಲಿ ಪಾಠ ನಡೆಯುವಾಗ ಕಾದಂಬರಿ ಕದ್ದೋದುವವರು, ಆಫೀಸಿನಲ್ಲೂ ಹಾಗೆ ಕದ್ದೋದುವವರು ಮನೆಯಲ್ಲಿ ಕ್ರಮಯುಕ್ತಪಾಠ ಕಲಿತಂತೆ ನಟಿಸುತ್ತ ಕದ್ದೋದುವವರು, ಎಲ್ಲೆಲ್ಲೂ ಕಾಣಬಹುದು. ಆದ್ದರಿಂದ ಈ ಓದು, ಇನ್ನೂ ಬೆಳೆಯದ ಬಾಲಿಕನಿಗೆ ಅಫೀಮು ತಿನ್ನಲು ಕಲಿಸದಂತೆಯೇ ಸರಿ.

ಈ ಓದಿಗೆ ಅಶಿಕ್ಷಿತ ಮನಸ್ಸನ್ನು ಅಷ್ಟೆಲ್ಲ ಆಕರ್ಷಿಸುವ ಶಕ್ತಿ ಏತರಿಂದ ಎಂದರೆ, ಅದು ಮನಸ್ಸಿನ ಸ್ವಭಾವದಲ್ಲಿ ಒಂದು ಕೊರತೆಯನ್ನುಪಯೋಗಿಸಿಕೊಂಡು ಅದಕ್ಕೆ ಆಹಾರ ಕೊಡುತ್ತದೆ. ಧರ್ಮರಾಯನಿಗೆ ಜೂಜಿನಲ್ಲಿ ಆಸೆ ಉಂಟೆಂಬುದನ್ನುಪಯೋಗಿಸಿ ಕೌರವರು ಅವನ ರಾಜ್ಯ ಅಪಹರಿಸಿದಂತೆ ಅದು. ಮನಸ್ಸು ಆಲೋಚನೆಗಳ ಒಂದು ಪ್ರವಾಹ. ಒಂದರ ನಂತರ ಇನ್ನೊಂದು ಆಲೋಚನೆಗೆ ಹಾರುತ್ತಿರುವುದು ಮನಸ್ಸಿನ ಸ್ವಭಾವ. ಅದು ಒಂದೇ ಕಡೆ ನಿಲ್ಲಲು ಬುದ್ಧಿಯ ಶ್ರಮಯುಕ್ತ ನಿರ್ಬಂಧ ಬೇಕು. ಅದರ ಅಭ್ಯಾಸವಿಲ್ಲದವರಿಗೆ ಮನಸ್ಸು ಒಂದೂ ಓಡುತ್ತಿರಬೇಕು: ಅಥವಾ ತಟಸ್ಥವಾಗಿ ನಿದ್ರಿಸಬೇಕು. ಅಂಥವರಿಗೆ ಮನಸ್ಸು ತನ್ನಷ್ಟಕ್ಕೆ ಹಾರಾಡುತ್ತಿರುವಾಗ ಹೊಸ ಹೊಸ ವಿಷಯಗಳಿಲ್ಲದಿದ್ದರೆ ಅದು ಯತ್ನಪೂರ್ವಕ ಅವುಗಳ ಕಲ್ಪನೆಗೆ ಆರಂಭಿಸಬೇಕಾಗುತ್ತದೆ. ಅಲ್ಲಿ ಏನಾಗಿರಬಹುದು? ಇದು ಏಕೆ ಹೀಗಾಯಿತು? ಎಂದು ಅದು ಯೋಚಿಸಬೇಕಾಗುತ್ತದೆ. ಆದರೆ ಇದಕ್ಕೆ ಉತ್ತರ ಹೇಳಿ ಸಮಾಧಾನ ಕೊಡಲು ಬುದ್ಧಿಯ ಕೆಲಸ ನಡೆಯಬೇಕು. ಅದು ಪ್ರಯಾಸಕರವಾದುದರಿಂದ ಬೇಡವಾಗುತ್ತದೆ. ಪ್ರಯಾಸವಿಲ್ಲದ ಮತ್ತೇನನ್ನು ಮಾಡುವುದೆಂದು ತೋರದೆ ತುಂಬಾ "ಬೇಸರ"ಪಟ್ಟು ಹೊಸತೇನಾದರೂ ನೋಡಲು ಸಿಗಲಿ ಎಂದು ಆಸೆ ಪಡುತ್ತದೆ. ಹೊಸತು ನೋಡಲಿಕ್ಕೆ ಸಂಚಾರಕ್ಕೆ ಹೋಗಲಿಕ್ಕೂ ಆಗದಿದ್ದರೆ ಅದು ತಟಸ್ಥವಾಗುತ್ತದೆ. ಅಂದರೆ ಅವರು ನಿದ್ರೆಹೋಗುತ್ತಾರೆ. ಅಂತೂ ಬುದ್ಧಿಯುಕ್ತ ಕೆಲಸ ಅದಕ್ಕೆ ರುಚಿಸದು.

ಆದರೆ ಕತೆಗಳಾಗಲಿ, ವಾರ್ತಾ ಪತ್ರಿಕೆಯಾಗಲಿ, ರೇಡಿಯೊದಲ್ಲಿ ಎಲ್ಲೆಲ್ಲೋ ನಡೆಯುವ ಕ್ರಿಕೆಟ್ ಆಟದ ವ್ಯಾಖ್ಯಾನವಾಗಲಿ, ದೊರೆತರೆ ಅವು

ಗಳ ಹೊಸ ಹೊಸ ಸಂಗತಿಗಳ ತರಂಗವೇ ಸಿಕ್ಕಿ, ಮನಸ್ಸಿಗೆ ಶ್ರಮವಿಲ್ಲದ ಧಾರಾಳ ಆಹಾರ ಒದಗುತ್ತದೆ. ಅದಕ್ಕೆ ತುಂಬಾ ನೆಮ್ಮದಿ ಆಗುತ್ತದೆ.

ತನ್ನ ಬಲೆಗೆ ಬಿದ್ದ ಈ ಓದುಗರಿಗೆ ಕತೆಗಾರ ಬಡಿಸಬೇಕಾದ ಔತಣ ವೆಂದರೆ ಮುಖ್ಯವಾಗಿ ಈ ವಿಚಾರಗಳ ಸರಣಿಯಲ್ಲಿ ಓದುಗರ ಬುದ್ಧಿಗೆ ಶ್ರಮ ಕೊಡುವ ವಿಷಯವಿರಕೂಡದು. ಹೊಸ ಸಂಘಟನೆಗಳು, ವಿವರ ಗಳು, ಪಾತ್ರಗಳು, ಗುಣ ನಿರೂಪಣೆ, ಒಂದಕ್ಕೊಂದು ಹೊಂದಿಕೊಂಡು ಸ್ವಾಭಾವಿಕವಾಗಿಬರಬೇಕು. ಇದಕ್ಕೂ ಅದಕ್ಕೂ ಏನು ಸಂಬಂಧ? ಅದು ನಿಜಕ್ಕೂ ಹೀಗೆ ಆಗಲಾರದಲ್ಲ? ಮುಂತಾಗಿ ತೋರುವ ಜಿಡುಕಾದ ಪ್ರಶ್ನೆ ಓದುಗನ ಮನಸ್ಸಿಗೆ ಬಂದರೆ, ಅವನು ಅಲ್ಲೂ ಓದು ಬಿಟ್ಟು ನಿದ್ರೆ ಮಾಡ್ಯಾನು. ಹೀಗೆ ಬುದ್ಧಿಯ ಶ್ರಮವಿಲ್ಲದೆ ಮನಸ್ಸನ್ನು ಮೇಯಿಸುವುದು ಈ ಅನುಲು ಓದಿನ ಮುಖ್ಯ ಸೂತ್ರ.

ಅನೇಕ ಕತೆಗಾರರು ತಮ್ಮ ಕೃತಿಗಳಿಗೆ ಇದಕ್ಕಿಂತ ಎಷ್ಟೋ ಮೇಲ್ತ ರದ ಧ್ಯೇಯ ಕಲ್ಪಿಸಿಕೊಳ್ಳುವುದುಂಟು. ಕೆಟ್ಟು ಹೋದವಳು ನಿಜಕ್ಕೂ ನಮ್ಮ ಹಾಗೆ ಉತ್ತಮ ಹೆಂಗುಸೇ ಆಗಿದ್ದಳು; ಕೊಲೆ ಮಾಡಿದವನೂ ನಮ್ಮಂತೆ ಉತ್ತಮ ಮನುಷ್ಯನೇ ಆಗಿದ್ದನು; ಅವರ ಮನೋಭಾವನೆ ಅಸಾಧ್ಯ ಸಂಘಟನೆಗಳಿಂದ ಹೇಗೆ ಕೆಟ್ಟಿತು ಎಂದು ತೋರಿಸಿ ಅವರ ವಿಚಾರ ನಾವು ಕಠಿಣ ಹೃದಯರಾಗದಂತೆ ಮಾಡಿ ಓದುಗರೆಲ್ಲ ವಿಶಾಲ ಹೃದಯರೂ, ಉದಾರ ಭಾವನೆಯುವರೂ ಆಗುವಂತೆ ಬುದ್ಧಿ ರುಚಿಕರವಾಗಿ ಕಲಿಸುವುದು ತಮ್ಮ ಬರಹಗಳ ಉದ್ದಿಶ್ಯ ಎಂಬುದು ಅವರ ಅಭಿಪ್ರಾಯ. ಹಾಗಿದ್ದರೆ ಕತೆಗಳನ್ನು ಹೆಚ್ಚುಹೆಚ್ಚಾಗಿ ಒದಿದಷ್ಟು ಜನರು ಹೆಚ್ಚುಹೆಚ್ಚು ಕಾರುಣ್ಯ ಮಯಿಗಳಾಗಬೇಕಷ್ಟೆ? ಆದರೆ ಬಂಡಿಗಟ್ಟಲೆ ಕಾದಂಬರಿ ಓದಿದವರೂ ಉತ್ತಮರಾದುದು ತೋರುವುದಿಲ್ಲ. ಮಾತ್ರವಲ್ಲ ಅವುಗಳನ್ನು ಬರೆಯುವ ವರೂ ಹೆಚ್ಚುಹೆಚ್ಚಾಗಿ ಧರ್ಮಿಷ್ಟರೂ, ದಾನಪರರೂ, ವಿಶಾಲ ಹೃದಯರೂ, ನಿರ್ವಂಚಕರೂ, ನಿರಹಂಕಾರಿಗಳೂ, ಇತರರ ತಪ್ಪುಗಳಿಗಿಂತ ತಮ್ಮ ತಪ್ಪು ಕಂಡುಕೊಂಡು ತಿದ್ದುತ್ತಿರುವವರೂ ಏಕೆ ಆಗರು? ಲೋಕದಲ್ಲಿ ಪಾಶ್ಚಾತ್ಯ ಕತೆಗಾರ ಟೋಲ್ಸ್ಟಾಯಿಯಂತಿರುವವರು ತೀರಾ ತೀರಾ ಅಪ ರೂಪ. ಟೋಲ್ಸ್ಟಾಯಿಯೂ ಕೂಡಾ ನಮ್ಮ ದೇಶದಲ್ಲಿ ಜನ್ಮವೆತ್ತಿದ್ದರೆ ತುಂಬಾ ಕತೆ ಬರೆಯುವ ದಾರಿ ಹಿಡಿಯುತ್ತಿದ್ದನೋ ಸಂಶಯ.

ಇದರ ಬದಲಾಗಿ ನಾವು ಸಾಮಾನ್ಯವಾಗಿ ನೋಡುವ ದೃಶ್ಯವೆಂದರೆ ಹುಡುಗಿ ಕತೆ ಓದಲು ಕುಳಿತವಳು, ಕಾಯಿಲೆಯಲ್ಲಿರುವ ತನ್ನ ತಾಯಿ ಕರೆದರೆ ಕೆಪ್ಪಳಂತೆ ಮಾಡುವಳು; ಅಥವಾ ಗೊಣಗುಟ್ಟುತ್ತ ಏಳುವಳು. ಮುದಿ ಅತ್ತೆ ನಾವಂದಿರೆಂದರೆ ಕಠಿಣ ಹೃದಯಳಾಗುತ್ತಾಳೆ. ಹುಡುಗರಿಗೆ ಕಾದಂಬರಿ ಓದಿದಷ್ಟೂ ಹಿರಿಯರಲ್ಲಿ ವಿಧೇಯತೆ, ನಮ್ರತೆ, ಕಡಿಮೆಯಾಗುತ್ತದೆ. ನೆರೆಹೊರೆಯವರ ವಿಚಾರ ಕನಿಕರ ಬತ್ತುತ್ತದೆ; ತಮ್ಮ ವ್ಯವಹಾರದಲ್ಲಿ ಇತರರ ವಿಚಾರ ನ್ಯಾಯಪರತೆ ಕಡಿಮೆಯಾಗುತ್ತದೆ. ಕಾದಂಬರಿ ಓದುವ ಹುಚ್ಚು ತುಂಬಾ ಇರುವವರು ನಿಷ್ಠಾಪರತೆಯುಳ್ಳ ಕೆಲಸಗಾರರಾಗುವುದೆಲ್ಲಿಯೂ ಕಾಣುವುದಿಲ್ಲ.

ನಾನು ಅನೇಕ ವರ್ಷಗಳ ಹಿಂದೆ ಅಕ್ಷರಾಭ್ಯಾಸವಿಲ್ಲದ ನನ್ನ ತಾಯಿಗೆ ಪುರಾಣ ಕತೆ, ಧಾರ್ಮಿಕ ವಿಚಾರ, ಓದಿ ಹೇಳುತ್ತಿದ್ದುದುಂಟು. ಒಮ್ಮೆ, ಅವಳಿಗೆ ಬಲ್ಲವನೊಬ್ಬನು ಬರೆದ ತುಂಬಾ ಚಮತ್ಕಾರಯುಕ್ತವಾದ ಕತೆಯನ್ನು ಓದಿ ಹೇಳಿದೆ. ಅದು ಮುಗಿಯುವುದರೊಳಗಾಗಿಯೇ, "ಅದರಲ್ಲಿ ದೇವರಿಲ್ಲ, ಓದಿ ಏನು ಪ್ರಯೋಜನ, ಬಿಡು" ಎಂದಳು. ನನ್ನ ಜೀವನದಲ್ಲಿ ಅದು ಚಿರವಾದ ಮಾರ್ಗದರ್ಶಕವಾಗಿ ನಿಂತಿತು. ಕತೆ ಕಾದಂಬರಿ ಓದದ ಅವಳ ಕರುಣೆ, ವಿಶಾಲ ಭಾವನೆ, ಕತೆ ಓದುವ, ಬರೆಯುವ, ಯಾರಲ್ಲೂ ನಾನು ಕಂಡುದಿಲ್ಲ.

ನಮ್ಮ ದೇಶದ ಓದಿನ ವಿಚಾರದ ಗುಟ್ಟು ನನ್ನ ತಾಯಿಯ ಆ ಮಾತಿನಲ್ಲಿ ಕಾಣಬಹುದು. ಕತೆಗಳು ರುಚಿಸುತ್ತವೆ ಸರಿ. ಆದರೆ ಜೀವನವು ಚಮತ್ಕಾರದ ಅಮಲಲ್ಲಿ ರಮಿಸಲು ನಮಗೆ ದೇವರು ಕೊಟ್ಟದ್ದಲ್ಲ. ಆತ್ಮದ ಏಳಿಗೆಗೆ ಈ ಚಮತ್ಕಾರ ಏನೂ ಬೇಕಾಗಿಲ್ಲ. ನಮ್ಮ ಜೀವನದ ಗುರಿ ಮರೆಯದಂತೆ ಪ್ರತಿಯೊಂದು ಕಾರ್ಯದಲ್ಲೂ ದೇವರನ್ನು ಸೇರಿಸುವುದು ಮಾತ್ರವೇ ಅತ್ಯುತ್ತಮ ದಾರಿ ಅದಕ್ಕೆ. ಅಮೃತ ಗ್ರಂಥಗಳ ಬೋಧನೆಯೂ ಇದೇ ಆಗಿರುತ್ತದೆ.

ಧಾರ್ಮಿಕ ದೃಷ್ಟಿಯಿಂದ ಕತೆಗೆ ನಮ್ಮಲ್ಲಿ ಸ್ಥಾನವೇ ಇಲ್ಲವೆಂದಲ್ಲ. ಅನೇಕರಿಗೆ ಧಾರ್ಮಿಕ ವಿಚಾರಗಳು ರುಚಿಸದಿದ್ದೀತು; ಆದುದರಿಂದ ಅವನ್ನು ಅವರ ಮಟ್ಟಕ್ಕೆ ಇಳಿಸಲು ಕಥಾರೂಪ ಕೊಡುವುದು ನಮ್ಮವರಿಗೆ ತಿಳಿದ ದಾರಿಯೇ ಆಗಿತ್ತು. ನಮ್ಮ ಪುರಾಣಗಳು ಈ ಕೆಲಸ

ಮಾಡುತ್ತವೆ. ಅಂತೆಯೇ ನಮ್ಮ ಧರ್ಮದಿಂದ ಸ್ಫೂರ್ತಿಹೊಂದಿದ ರಜಪೂತ ವೀರರು, ಶಿವಾಜಿ ಮಹಾರಾಜರು, ವಿದ್ಯಾರಣ್ಯರು ಮುಂತಾದವರ ಕಥೆ ಬರೆದೂ ಯಶಸ್ವೀ ಓದು ಉಂಟು ಮಾಡಿದವರುಂಟು. ಆದರೆ ಅಂತಹ ಪವಿತ್ರ ವಿಚಾರ ಬರೆಯುವವರೂ ಉತ್ತಮ ಜೀವನ ನಡೆಸುವವರಾಗಬೇಕು. ಆದಷ್ಟು ಮಟ್ಟಿಗೆ ಮಹಾ ಪುರುಷರ ನಿಜ ಜೀವನ, ಸಾಹಸ, ಬೋಧನೆ, ಅದರಲ್ಲಿ ಹಾಕಿ, ತಮ್ಮ ಅಲ್ಪ ಭಾವನೆಗಳನ್ನು ಅದರಲ್ಲಿ ತುಂಬದೆ ಇದ್ದಷ್ಟೂ, ಆ ಕತೆಗಳು ತಮ್ಮ ಉತ್ತಮ ಕೆಲಸ ಮಾಡ್ಯಾವು. ಆಗ ಅವು "ಅಮಲು" ವರ್ಗದ ಓದಿನ ಬದಲು "ಅಮೃತ" ವರ್ಗದವಾದಾವು.

ಧಾರ್ಮಿಕ ವಿಚಾರಗಳು ಮಾತ್ರವೇ ಶೀಲವನ್ನು ಉತ್ತಮ ಮಾಡೀತಾದುದರಿಂದಲೇ, ಸಾಮಾನ್ಯರಿಗಾಗಿ ಈ ಬಗ್ಗೆ ತಯಾರಿಸಿದ ನಮ್ಮ ಬಯಲಾಟಗಳು ನೂರಾರು ವರ್ಷ ಕಾಲ ದೇವರ "ದಶಾವತಾರ" ಆಟವಾಗಿಯೇ ಉಳಿದುದು ಆಶ್ಚರ್ಯವಲ್ಲ. ಒಮ್ಮೆ ಅವಕ್ಕೆ ಇತರ ತರದ ಕತೆ ಸೇರಿಸಲು ಆರಂಭಿಸಿದೆವೆಂದರೆ, ಅವು ಕ್ರಮೇಣ ಎಷ್ಟು ಕೆಳಮಟ್ಟಕ್ಕೆ ಇಳಿದಾವು ಎಂದು ಹೇಳುವ ಹಾಗಿಲ್ಲ! ಕಲೆಯ ಕೊಲೆ ಅಲ್ಲೂ ನಡೆದೀತು.

ಈಗ ಬರುವ ಕತೆ, ಕಾದಂಬರಿಗಳ ವರ್ಗದಲ್ಲಿ ಬಹಳ ಅಪರೂಪಕ್ಕೊಂದು ಅಮೃತ ವರ್ಗದ ಉತ್ತಮ ತರದ್ದು ಇರಬಹುದು. ಆದರೆ ಅದನ್ನು ಆರಿಸುವ ಸ್ವಪ್ರಯತ್ನಕ್ಕೆ ಬಾಲಕರೇ ,ಇಳಿದರೆ, ಮಾದರಿ ನೋಡಲಿಕ್ಕೆಂದು ಮದ್ಯವನ್ನು ರುಚಿ ನೋಡುತ್ತ ಅದರ ಅಭ್ಯಾಸಕ್ಕೆ ಬಿದ್ದಂತಾದೀತು.

ಆದುದರಿಂದ ಈ ರುಚಿ ನೋಡುವ ಹವ್ಯಾಸ ಕೂಡ ಅವರಿಗೆ ಉತ್ತಮವಲ್ಲ. ಧಾರ್ಮಿಕ ದಾರಿ ತುಳಿಯುವ ತುಂಬಾ ಬಲ್ಲವರ್‍ಯಾರಾದರೂ ಶಿಫಾರಸು ಮಾಡಿದ ಕಾದಂಬರಿಗಳನ್ನು ಮಾತ್ರ ಓದುವ ಅಭ್ಯಾಸ ಬ್ರಾಹ್ಮಣರಿಗೆ ಸಾಕು. ಆಗ ಕೂಡ ಅಂತಹ ಓದಲ್ಲಿ ತಿರುಳು ಒಂದು ಪೇಜು ಇದ್ದರೆ ಅದಕ್ಕಾಗಿ ತಿರುವಬೇಕಾದುದು ನೂರು ಪೇಜು; ಒಂದು ಹಿಡಿ ಭತ್ತ ಒಂದು ಬುಟ್ಟಿ ಉಮಿಯೊಡನೆ ಸೇರಿಸಿದ್ದು ಅದು ಎಂಬುದು ಕ್ರಮೇಣ ಅವರ ಅನುಭವಕ್ಕೆ ಬಾರದಿರದು.

ಪಾಶ್ಚಾತ್ಯ ದೇಶಗಳಲ್ಲಿ ತುಂಬಾ ಮೇಧಾವಿಗಳೂ, ಉತ್ತಮ ಸ್ಥಾನದಲ್ಲಿರುವವರೂ ಕಾದಂಬರಿ, ಪತ್ರಿಕೆ, ಎಲ್ಲ ಓದುತ್ತಾರಲ್ಲ? ಅವರಿಗೆ ತಮ್ಮ

ಜವಾಬ್ದಾರಿ ತಿಳಿಯದೇ? ಎಂದು ಓದುಗರು ಕೇಳಬಹುದು. ಅಲ್ಲಿ, ಎಂತಹ ಮೇಲ್ತರಗತಿಯವನಾದರೂ ಮದ್ಯದ ಸೇವನೆ ಮಾಡುವುದು ತಪ್ಪು ಎಂಬ ಭಾವನೆ ಇಲ್ಲ. ಮಾತ್ರವಲ್ಲ, ಪ್ರಖ್ಯಾತ ಅತಿಥಿಗೆ ಸನ್ಮಾನ ಮಾಡಲು ನಡೆಯುವ ಊಟದಲ್ಲಿ ಎಲ್ಲರೂ ಅವನ ಆಯುರಾರೋಗ್ಯ ಬಯಸಿ ಮದ್ಯ ಕುಡಿಯುವುದು ಅವರ ಕ್ರಮ. ಆದರೆ ನಮ್ಮ ದೇಶದಲ್ಲಿ ಹಾಗಿಲ್ಲ. ಎಲ್ಲರಿಂದಲೂ ಮದ್ಯ ತ್ಯಜಿಸಲು ಸಾಧ್ಯವಲ್ಲದಿದ್ದರೂ ಕೆಲವು ವರ್ಗದವರಿಗೆ ಅದು ಸಾಧ್ಯವಾಗಿದೆ. ಅವರು ಹಾಗೆ ಮಾಡಲೇ ಬೇಕು ಎಂದು ನಮ್ಮ ಧರ್ಮ ವಿಧಿಸಿತು; ಅದರಿಂದಾಗಿ ಬ್ರಾಹ್ಮಣರಿಗೆ ಮದ್ಯ ತ್ಯಜಿಸುವುದು ಸಾಧ್ಯವಾಯಿತು. ಅದರಿಂದ ನಮಗೆ ತುಂಬಾ ಪ್ರಯೋಜನ ಸಿಕ್ಕಿತು. ಮಾಂಸಾಹಾರದ ವಿಚಾರದಲ್ಲೂ ಎಲ್ಲ ಜೀವಿಗಳಲ್ಲೂ ಪರಮಾತ್ಮನನ್ನು ಕಾಣುವುದು ಮಾನವನ ಗುರಿಯಾಗಿರಬೇಕಾದರೂ, ಎಲ್ಲರಿಗೂ ಮಾಂಸ ತಿನ್ನದಿರಲು ಸಾಧ್ಯವಾಗದೆಂದು, ಬ್ರಾಹ್ಮಣರಿಗೆ ಮಾತ್ರ ನಮ್ಮ ಆಚಾರ ಅದರ ನಿಷೇಧ ವಿಧಿಸಿತು. ಅದರಿಂದಾಗಿ ನಮಗೆ ಮಾಂಸಾಹಾರ ಮಾಡದಿರುವುದು ತೀರಾ ಸಾಧ್ಯವಾಯಿತು; ಪ್ರಯೋಜನಕಾರಿಯಾಯಿತು. ಲಕ್ಷಾಂತರ ಜನರ ಈ ತರದ ಮೇಲ್ತರದ ಅಭ್ಯಾಸ ಸಾವಿರಾರು ವರ್ಷ ಕಾಲ ನಡೆದುದು ಭೂಲೋಕದ ಇನ್ನೆಲ್ಲೂ ಕಾಣೆವು. ಆದುದರಿಂದ ಧಾರ್ಮಿಕ ಜೀವನದಲ್ಲಿ ಇತರ ದೇಶಗಳ ಮೇಲ್ಪಂಗ್ತಿಗಿಂತ ಎಷ್ಟೋ ಮೇಲೆ ಹೋಗಲು ಸಾಧ್ಯವಾದವರು ನಾವು. ನಮಗೆ ಅವರ ಕೀಳ್ತರದ ಆದರ್ಶ ಬೇಡ.

ದೇಹದ ಅಭಿಲಾಷೆಗಾಗಿ ಮನುಷ್ಯನಿಗೆ ಸಾಮಾನ್ಯವಾಗಿ ಆಕರ್ಷಣೀಯವಾದ ಮಾಂಸ ಮದ್ಯ ಬ್ರಾಹ್ಮಣನಿಗೆ ಅಭೋಜ್ಯವಾದಂತೆಯೇ ನಮ್ಮ ಮನಸ್ಸಿನ ಆಹಾರಕ್ಕೂ ಈ "ಅಮಲು" ವರ್ಗದ ಗ್ರಂಥಗಳು ಅಗತ್ಯವಾಗಿ ತ್ಯಾಜ್ಯವಿರಬೇಕು ಎಂಬುದು ನನ್ನ ಅಭಿಪ್ರಾಯ.

ಬ್ರಾಹ್ಮಣನಿಗೆ ತನ್ನ ಮನಸ್ಸನ್ನು ಬುದ್ಧಿಯ ಹತೋಟಿಗೆ ತರುವುದು ಸಾಧ್ಯ ಎಂಬುದು ನಮ್ಮ ಧರ್ಮದ ನಿರ್ಧಾರ. ಅವನ ಜೀವನ ಆ ತಳಹದಿಯ ಮೇಲೆ ಬೆಳೆಯಬೇಕು. "ಧರ್ಮ ವಿಧಿಸಿದುದು ಮಾತ್ರ ನನಗೆ ಹಿತಕರ: ಆದ್ದರಿಂದ ಅದನ್ನು ಮಾಡುತ್ತೇನೆ" ಎಂಬ ಧ್ಯೇಯ ಅವನಿಗೆ ಇರಬೇಕೇ ಹೊರತು, ರುಚಿಕರವಾದುದು ಮಾತ್ರ ಮಾಡುತ್ತೇನೆಂದು ಅವನು ನಿರ್ಧರಿಸಕೂಡದು. ಧರ್ಮವು ನಮಗೆ ವಿಧಿಸಿದ ನಿತ್ಯ ಸ್ನಾನ, ಸಂಧ್ಯೋ

ಪಾಸನೆ, ಪೂಜೆ, ಉಪವಾಸ, ದಾನ, ಮುಂತಾದವುಗಳ ಅಭ್ಯಾಸಕ್ಕೆ ನಾವು ಇನಾವಿನ ಆಸೆ ಇಟ್ಟುಕೊಳ್ಳುವುದಿಲ್ಲ. ಅಂತೆಯೇ ಮನಸ್ಸಿಗೆ ಕೊಡುವ ಆಹಾರ ರೂಪದ ಓದಲ್ಲಿ "ಬರೇ ರುಚಿ ಇದ್ದುದರಿಂದ ಓದುತ್ತೇನೆ" ಎನ್ನದೆ ಅಮಲು ಓದು ತ್ಯಜಿಸುವ ಶಕ್ತಿ ಬೆಳೆಸಬೇಕು.

ಇನ್ನು ಬ್ರಾಹ್ಮಣ ಬರಹಗಾರರೂ ಒಂದು ವಿಚಾರ ಯೋಚಿಸಲಿ. ತಮ್ಮ ಶಕ್ತಿಯನ್ನು ಶೀಲ ಬೆಳೆಸುವ ಬರೆಹಗಳಲ್ಲಿ ಮಾತ್ರ ವಿನಿಯೋಗಿಸುವುದು ಅವರ ಧರ್ಮಕ್ಕೆ, ಶಕ್ತಿಗೆ, ಯುಕ್ತವಾದ ದಾರಿಯಾದೀತು. ಅದಕ್ಕಾಗಿ ಅವರು ತಮ್ಮಲ್ಲಿ ಧಾರ್ಮಿಕ ಭಾವನೆ ಪ್ರಥಮತಃ ತುಂಬಾ ಬೆಳೆಸುವ ನಿರ್ಧಾರ ಮಾಡಲಿ. ಅಮೃತವನ್ನು ಖಂಡಿಗಟ್ಟಲೆ ಸೇವಿಸಬೇಕಾದುದಿಲ್ಲ. ನೂರಾರು ತೀರಾ ಸಾಮಾನ್ಯ ಪುಸ್ತಕ ಬರೆಯುವುದಕ್ಕಿಂತ ಕೆಲವು ಮಾತ್ರ ಮನಸ್ಸನ್ನು ಶುದ್ಧ ಮಾಡುವ, ನಮ್ಮ ಧರ್ಮದಲ್ಲಿ ಶ್ರದ್ಧೆ ಹೆಚ್ಚಿಸುವ, ಅತ್ಯುತ್ತಮ ಪುಸ್ತಕಗಳನ್ನು ಬರೆದರೆ ಸಾಕು, ಎಂಬ ನಿರ್ಧಾರ ಅವರಲ್ಲಿ ಬೆಳೆಯಲಿ ಎಂದು ನನ್ನ ಆಶೆ.

ವಾರ್ತಾ ಪತ್ರಿಕೆಗಳು ಓದುಗರಲ್ಲಿ, ಎಲ್ಲೆಲ್ಲೋ ನಡೆಯುವುದನ್ನೆಲ್ಲ ಓದಬೇಕೆನ್ನುವ ಹವ್ಯಾಸ ಹುಟ್ಟಿಸುತ್ತವೆ. ಇದು ಜೀವನದ ಉತ್ತಮ ಸಮಯದ ದುರುಪಯೋಗನೇ ಆದೀತು. ಅದಕ್ಕಿಂತ ನಾವೆಲ್ಲರೂ ಹೋಗಲೇ ಬೇಕಾದ ಪರಲೋಕದ ಚಿಂತನೆ ಆಗಾಗ ಇರುವುದು ಪ್ರಯೋಜನಕರ. ಪ್ರಾಮುಖ್ಯವಾದ ವರ್ತಮಾನಗಳ ಸಂಗ್ರಹವನ್ನು ವಾರಕ್ಕೊಮ್ಮೆ ಓದಿಕೊಂಡಿದ್ದರೂ, ನಮ್ಮ ಲೌಕಿಕ ಕೆಲಸಕ್ಕೆ ಧಾರಾಳವಾಗಿ ಸಾಕಾಗುತ್ತದೆಂಬುದು ಅಭ್ಯಾಸ ಮಾಡಿದವರಿಗೆ ಅನುಭವಕ್ಕೆ ಬಂದೀತು. ನಿತ್ಯದ ಹರಟೆಗೆ ಮಾತ್ರ ಅದು ಸಾಕಾಗದು ಅಷ್ಟೆ. ಸ್ವಾಮಿ ರಾಮತೀರ್ಥರ ಹೇಳಿಕೆಯಂತೆ—ಪತ್ರಿಕೆ ಓದದವ ನಿಸರ್ಗವನ್ನು ಕಂಡಾನು; ತನ್ಮೂಲಕ ದೇವರನ್ನು ಕಂಡಾನು—ಎಂಬುದು ಬ್ರಾಹ್ಮಣರ ಧ್ಯೇಯವಾಗಿ ಇರಲಿ.

## ೬. ಅಮೇಧ್ಯ ವರ್ಗದ ಓದು.

ಕಡೆಯ ವರ್ಗವಾದ ತೀರಾ ನಿಕೃಷ್ಟ ತರದ ಓದಿಗೆ ಪ್ರಾಸಕ್ಕಾಗಿ "ಅಮೇಧ್ಯ" ಎಂದು ಹೆಸರು ಕೊಟ್ಟರೂ ಅದರಲ್ಲಿ ಹೊಲಸು ಮಾತ್ರವಲ್ಲ; ನಮಗೆ ಖಂಡಿತ ಘಾತ ತರುವ ಅಲಗು, ಉರಿ, ವಿಷ, ಮುಂತಾದ ತರಧ

ಓದೂ ಸೇರಲ್ಪಟ್ಟಿದೆ. (1) ಕಾಮುಕತೆ ಉದ್ರೇಕಗೊಳಿಸುವ ಪುಸ್ತಕಗಳು; (2) ಹಿಂಸೆ, ಕೊಲೆ, ಅತ್ಯಾಚಾರಗಳನ್ನು ಮಕ್ಕಳ ದೃಷ್ಟಿಗೆ ತುಂಬಾ ಬೆರಗು ಮಾಡುವ ವೀರರಸದವುಗಳಂತೆ ಚಿತ್ರಿಸುವವು; ಅನ್ಯಾಯ, ಅಧರ್ಮ, ಅಸತ್ತುಗಳನ್ನು ಜಯಶೀಲವಾಗಿ ತೋರಿಸುವವು; (3) ಸ್ವಾರ್ಥದ ಪ್ರಚಾರಕ್ಕಾಗಿ ಸತ್ಯದ ಅಪೂರ್ಣವಾದ ಒಂದಂಶಕ್ಕೆ ಬೇಕಾದಷ್ಟು ಸುಳ್ಳು ಬೆರಸಿ ಅಸಮಾಧಾನ, ದ್ವೇಷ, ಅಸೂಯೆ, ಹೆಚ್ಚಿಸುವವು; ಶಾಸ್ತ್ರವನ್ನೂ ದೇವರನ್ನೂ ಹಳಿಯುವವು; ಇವೆಲ್ಲ ಈ ವರ್ಗಕ್ಕೆ ಸೇರಿದವು. ಇವು ಈ ಕಾಲದ ವಿಚಿತ್ರ ನಾಗರಿಕತೆಯ ವಾತಾವರಣದಲ್ಲಿ ಭಯಂಕರ ರೀತಿಯಲ್ಲಿ ಬೆಳೆಯುತ್ತಿವೆ.

ಮನಸ್ಸನ್ನು ಹೊಲಸು ಮಾಡದೆ ಅದಕ್ಕೆ ಉತ್ಸಾಹ ಕೊಡುವಂತಹ ಹೂವು, ಮೋಡ, ನದಿ, ಮುಂತಾದ ಸೌಂದರ್ಯದ ದೃಶ್ಯಗಳನ್ನು ನಿಸರ್ಗದ ನೂರಾರು ರೂಪಗಳಲ್ಲಿ ನಾವು ಕಾಣಬಹುದು. ಮುಂಚೆ ಅವಕ್ಕೆಲ್ಲ ಬೆಲೆ ಇತ್ತು. ಆದರೆ ಈಗಲೀಗ ತನ್ನ ದೇಹದ ರೂಪಿಂದ ಹಣ ಸಂಪಾದನೆ ಮಾಡುವ ಅನ್ಯಸ್ತ್ರೀಯ ಚಿತ್ರವೇ ಎಲ್ಲಿ ಕಂಡರೂ ಕಣ್ಣೆದುರು ನಿಲ್ಲುವಂತೆ ಪತ್ರಿಕಾಕರ್ತರು ಶತಪ್ರಯತ್ನ ಮಾಡುತ್ತಿದ್ದಾರೆ. ಸೌಂದರ್ಯದ ಆದರ್ಶದ ಅತಿ ಮೇಲಿನ ಮಟ್ಟ ಅವರಿಗೆ ಇದಕ್ಕಿಂತ ಬೇರೆ ಇಲ್ಲದಾಗಿದೆ. ಅಥವಾ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಬೇಕೆನ್ನುವವರು ಅರೆಬತ್ತಲೆ ಸ್ತ್ರೀಯ ಚಿತ್ರವನ್ನು ತಮ್ಮ ಪತ್ರಿಕೆಯ ಆಕರ್ಷಣೆ ಹೆಚ್ಚಿಸಲು ಪ್ರಕಟಿಸುತ್ತಿದ್ದಾರೆ. ಯುವಕರು ವಾಚನಾಲಯಗಳಲ್ಲಿ ಅರ್ಧ ಗಂಟೆಯಲ್ಲಿ ಹತ್ತು ಪತ್ರಿಕೆ "ಓದಿ" ಮುಗಿಸುವುದು ಅನೇಕ ವೇಳೆ ಈ ಚಿತ್ರಗಳಿಗಾಗಿ.

ನಮ್ಮ ಪೂರ್ವಿಕರು ಪಶುವೃತ್ತಿಯಾದ ಕಾಮುಕತೆ ಗೆಲ್ಲುವುದನ್ನು ಜೀವನದ ಗುರಿಯಾಗಿಟ್ಟರು. ಆದರೆ ಅದನ್ನು ಬೇಕೆಂದೇ ಉದ್ರೇಕಗೊಳಿಸುವುದು ಈಗಿನವರ ಮುಖ್ಯ ಪ್ರಯತ್ನವಾಗಿದೆ! ಅದಕ್ಕಾಗಿ ಪಾಶ್ಚಾತ್ಯ ವಿಜ್ಞಾನಿಗಳು ಕಾಮದ ವಿಜ್ಞಾನವನ್ನು ತುಂಬಾ ಶೋಧಿಸಿ ಪ್ರಕಟಿಸಿದ್ದಾರೆ. ಅವರ ಕಾಮದ ವಿಜ್ಞಾನದ "ಅರಿವಿನ" ಪರಿಣಾಮ ಮಾತ್ರ ಭಯಂಕರವಾಗಿದೆ. ಈ "ವಿಜ್ಞಾನ"ವಿದ್ದಿಲ್ಲದ ಮುಂಚಿನ ಕಾಲದಲ್ಲಿ ಸಾವಿರಾರು ದಂಪತಿಗಳಲ್ಲಿ ಒಬ್ಬಿಬ್ಬರಿಗೆ ಕಾಮದ ಸುಖ ಹೆಚ್ಚು ಸಿಕ್ಕದಿದ್ದಿರಬಹುದಾದರೂ, ಪೂರ್ಣತೆ ಏನೆಂದೇ ತಿಳಿಯದೆ ಅವರು ಅದಕ್ಕಾಗಿ ಅಸಮಾಧಾನ

ಹೊಂದಲು ಅರಿಯದವರಾದರು. ಈಗಲಾದರೋ, ಪರಿಪೂರ್ಣತೆ ಎಲ್ಲೂ ಇಲ್ಲದ ಈ ಲೋಕದಲ್ಲಿ ಕಾಮದ ಪರಿಪೂರ್ಣತೆ ಮಾತ್ರ ಸಿಗಲೇಬೇಕೆಂದು ಆಶಿಸಿ, ತಮ್ಮ ಕಲ್ಪನೆಯ ಮಟ್ಟ ಮುಟ್ಟಲಾರದೆ ಅಸಮಾಧಾನ ಪಟ್ಟು, ಪುನಃಪುನಃ ಮದುವೆ ವಿಚ್ಛೇದ, ಜೊತೆ ಸರಿಹೋಗುತ್ತದೋ ನೋಡಲು ತಾತ್ಕಾಲಿಕ ವಿವಾಹ, ಅಕಸ್ಮಾತ್ತಾಗಿ ಹುಟ್ಟಿದ ಮಕ್ಕಳಿಗೆ ಗತಿ ಇಲ್ಲದಂತಾಗುವುದು, ಅಥವಾ ಕಾಮುಕತೆಗೆ ಅವು ತೊಡಕೆಂದು ತಾಯಂದಿರಿಂದಲೇ ಕೊಲ್ಲಲ್ಪಡುವುದು, ಎಲ್ಲಾ ಹೆಚ್ಚುಹೆಚ್ಚಾಗಿ ನಡೆಯಲಾರಂಭಿಸಿದೆ. ನಮ್ಮ ದೇಶಕ್ಕೂ ಈ "ನಾಗರಿಕ" ಓದು ಬೇಕೆಂದು ಇತ್ತೀಚೆಗೆ ಎಲ್ಲೆಲ್ಲೂ ನಿರ್ಭಯವಾಗಿ, ಲಜ್ಜೆ ಇಲ್ಲದೆ, ಅವುಗಳ ಮಾರಾಟ ನಡೆಯುತ್ತಿದೆ. "ಧರ್ಮಸ್ಥಳ ಜಾತ್ರೆಯಲ್ಲಿ ಎಲ್ಲಿ ಕಂಡರೂ ಈ ಹೊಲಸು ಪುಸ್ತಕಗಳ ರಾಶಿ" ಎಂದು ಒಬ್ಬರು ಹೇಳಿದರು. ತಮ್ಮ ಹೊಲಸನ್ನು ಎಲ್ಲೆಲ್ಲೂ ಮಾರಾಟ ಮಾಡಲು ಪಾಪದ ಭಯ ಪಡದ ಕಾಲವಿದು.

ಹಿಂಸೆ, ಕೊಲೆ, ಅತ್ಯಾಚಾರಗಳನ್ನು ಬೆರಗು ಮಾಡುವ ರೀತಿ ಚಿತ್ರಿಸುವ ಯತ್ನ, ಓದಲ್ಲಿ ನಡೆಯುವುದಕ್ಕಿಂತ ಸಿನೆಮಾದಲ್ಲಿ, ಟೆಲಿವಿಶನ್ನಲ್ಲಿ ಹೆಚ್ಚಾಗಿ ನಡೆಯುತ್ತದೆ. ಅಮೇರಿಕದಲ್ಲಿ ತುಂಬಾ ಇರುವ ಅದನ್ನು ಕಂಡು ಹುಡುಗರು ಮುದಿ ತಾಯಿಗೆ ಗುಂಡು ಹಾಕುವುದು, ತಂಗಿಯನ್ನು ಕೊಲೆ ಮಾಡುವುದು, ಮೋಟಾರು ಕಾರನ್ನು ವಿಪರೀತ ವೇಗದಲ್ಲಿ ಓಡಿಸಿ ಅಪಘಾತ ಉಂಟುಮಾಡುವುದು, ಎಲ್ಲಾ ಅಲ್ಲಿ ಹೆಚ್ಚುತ್ತಿವೆ. ಅಂತಹ ಕತೆಗಳು ನಮ್ಮ ದೇಶಕ್ಕೂ ಬೇಕಾಗುತ್ತ ಬರುತ್ತಿವೆ! ಅನ್ಯಾಯಕ್ಕೆ ಜಯ ಕೊಡುವ ಕತೆಗಳೂ ಸಿನೆಮಾ ಚಿತ್ರಗಳೂ ನಮ್ಮಲ್ಲೂ ಈಗ ಉಂಟಾಗುತ್ತಿವೆ.

ಮೂರನೆಯ ತರದ "ಅಮೇಧ್ಯ" ಓದಾದ ಅಪಪ್ರಚಾರ ಲೋಕಕ್ಕೆ ಎಂತಹ ಹಾನಿ ತಂದೀತೆಂಬುದಕ್ಕೆ ಕಳೆದ ಘೋರ ಯುದ್ಧಕ್ಕೆ ಕಾರಣನಾದ ಹಿಟ್ಲರನೇ ಅತಿ ದೊಡ್ಡ ದೃಷ್ಟಾಂತ. ಜರ್ಮನರು, ಭೂಲೋಕದಲ್ಲೆಲ್ಲ ತಾವು ಅತೀವ ಮೇಲ್ತರದ ಮೇಧಾವಿಗಳೆಂದು ಭಾವಿಸಿದ್ದರು. ಆದರೂ ಅವರು ಹಿಟ್ಲರನ ಅಪಪ್ರಚಾರಕ್ಕೆ ತುತ್ತಾಗಿ ತಮ್ಮೊಡನೆಯೇ ಆ ದೇಶದಲ್ಲಿ ಹುಟ್ಟಿ ಬೆಳೆದ, ಏನೂ ಅನ್ಯಾಯ ಮಾಡದ, ಹಲವು ಮಿಲಿಯ ಯಹೋವ ಗಂಡಸರು ಹೆಂಗಸರು ಮಕ್ಕಳನ್ನು ಹಿಂಸಿಸಿ, ನಿರ್ಗತಿಕರನ್ನಾಗಿ ಮಾಡಿ, ಅವರ ಕೊಲೆಯನ್ನೂ ನಡೆಸಿದರು. ನಮ್ಮಲ್ಲೂ ಅಸತ್ಯ ತುಂಬಿರುವ ವಿಷಪ್ರಾಯದ

ಓದುಗಳು ಜಾತಿ-ಜಾತಿಯೊಳಗೆ, ವರ್ಗ-ವರ್ಗದೊಳಗೆ ಪ್ರಾಂತ್ಯ-ಪ್ರಾಂತ್ಯ ದೊಳಗೆ ತುಂಬಾ ದ್ವೇಷವನ್ನು ಉಂಟು ಮಾಡುತ್ತವೆ. ದೇವರಿಲ್ಲವೆನ್ನುವ ಓದು ಈ ಭಾಗದ ಅತೀವ ಹಾನಿ ತರದ್ದು. ಅವುಗಳಿಂದೆಲ್ಲ ದೂರ ಇದ್ದಷ್ಟೂ ಉತ್ತಮ. ನಮ್ಮ ಯುವಕರ ರುಚಿ ಸರಿ ದಾರಿಯಲ್ಲಿ ಬೆಳೆಸಿ, ಈ "ಅಮೇಧ್ಯ" ಕಂಡೊಡನೆ ತ್ಯಜಿಸುವ ಮಟ್ಟಕ್ಕೆ ತರಬೇತು ಮಾಡಬೇಕು.

## ೭. ಓದಿನ ಪವಿತ್ರತೆಯ ರಕ್ಷಣೆ.

ನಮ್ಮಲ್ಲಿ ಈಗ ಕೆಡುಕನ್ನುಂಟುಮಾಡುತ್ತಿರುವ "ಅಮಲು" ಮತ್ತು "ಅಮೇಧ್ಯ" ವರ್ಗದ ಓದುಗಳು ನಮ್ಮ ದೇಶಕ್ಕೆ ಹೊಸತು. ಹಿಂದೆ ಹಲವು ಸಾವಿರ ವರ್ಷ ಕಾಲ ನಮ್ಮಲ್ಲಿ ತುಂಬಾ ಬರೆಹಗಾರರು ಇದ್ದಿದ್ದರಾದರೂ ಹಾಳು ತರದ ಓದು ನಮ್ಮಲ್ಲಿರಲಿಲ್ಲ. ಅವು ಈಗ ಉಂಟಾದುದು ಪಾಶ್ಚಾತ್ಯರ ಅನುಕರಣೆಯಿಂದಾಗಿ. ಮುಂಚಿನಿಂದ ನಮ್ಮಲ್ಲಿ ಅಶ್ಲೀಲ ಓದು ಹುಟ್ಟದಂತೆ ನಮ್ಮ ಪೂರ್ವಿಕರು ಯಾವ ಉಪಾಯ ಹೂಡಿದರು?

ಬರಹ ದೇವರು, ವಿದ್ಯೆ ಸರಸ್ವತಿ, ಎಂಬ ಭಾವನೆಯನ್ನು ಅವರು ಎಲ್ಲರಲ್ಲೂ ಉಂಟುಮಾಡಿದರು. ನಮ್ಮಲ್ಲಿ ಇತ್ತೀಚಿನ ವರೆಗೂ ಬಾಲಕನ ವಿದ್ಯಾರಂಭವನ್ನು ಉತ್ತಮ ಮುಹೂರ್ತ ನೋಡಿ ಮಾಡುತ್ತಿದ್ದೆವು. ಅವನ ಪ್ರಥಮ ಬರಹ ದೇವರ ಮುಂದೆ ನಡೆಯುತ್ತಿತ್ತು. ಅದು ದೇವರ ಪವಿತ್ರ ನಾಮವಾಗಿತ್ತು. ಬರಹ, ಪುಸ್ತಕ ರೂಪದಲ್ಲಿರಲಿ, ಬಿಡು ಹಾಳೆಯಲ್ಲಿರಲಿ, ನೆಲದ ಮೇಲೆ ಬರೆದುದಾಗಲಿ, ಅದನ್ನು ತುಳಿಯುತ್ತಿರಲಿಲ್ಲ. ತಿಳಿಯದೆ ಮೆಟ್ಟಿದರೆ ಅದಕ್ಕೆ ನಮಸ್ಕಾರ ಮಾಡುತ್ತಿದ್ದೆವು. ವ್ಯಾಪಾರಿಯ ತೀರಾ ಲೌಕಿಕ ತರದ ಲೆಕ್ಕದ ಪುಸ್ತಕಕ್ಕೆ ಕೂಡ, ವಿದ್ಯಾರ್ಥಿಯ ಆಂಗ್ಲ ಭಾಷೆಯ ಪಾಠದ ಪುಸ್ತಕಕ್ಕೆ ಕೂಡ, ವರ್ಷಕ್ಕೊಮ್ಮೆ ಪೂಜೆ ನಡೆಸುತ್ತಿದ್ದೆವು. ಹೀಗೆ ಹಲವು ರೀತಿಗಳಿಂದ ವಿದ್ಯೆಯು ಪವಿತ್ರವಾದುದು, ಆದುದರಿಂದ ಅದರ ಕ್ಷುದ್ರ ಉಪಯೋಗ, ಅಪವಿತ್ರತೆ, ನಡೆಸಬಾರದು, ಎಂಬ ಭಾವನೆ ಬರೆಯ ಬಲ್ಲವರಲ್ಲೆಲ್ಲ ರಕ್ಷಣೆಯಾಗಿ ನಿಂತಿತು. ಹುಡುಕಿದವರಿಗೆ ಮಾತ್ರ ಪ್ರಾಯಶಃ ಸಾವಿರ ಪುಸ್ತಕಗಳಲ್ಲೊಂದರಲ್ಲಿ ಸ್ವಲ್ಪ ಹೊಲಸು ಸಿಕ್ಕುತ್ತಿತ್ತೋ ಏನೋ.

ವಿದ್ಯೆ ಪವಿತ್ರವೆಂದಾದ ಮೇಲೆ ಈ ಭಾವನೆಯನ್ನು ಇನ್ನೂ ಭದ್ರ ಮಾಡಲು, ಅದಕ್ಕೆ ಹಣದಿಂದ ಬೆಲೆ ಕಟ್ಟುವುದು ಸರಿಯಲ್ಲ ಎಂದರು.

ಆದ್ದರಿಂದ ಅದು ಹಣಕ್ಕಾಗಿ ಮಾರಾಟಕ್ಕೆ ಸಿಕ್ಕುವ ವಸ್ತು ಆಗಕೂಡದು ಎಂದರು. ಈ ಭಾವನೆ ಕಾರ್ಯರೂಪಕ್ಕೆ ತರಲು ಗುರುವು ತನ್ನೆಡೆಗೆ ಬಂದ ಎಲ್ಲಾ ಯೋಗ್ಯ ಶಿಷ್ಯರಿಗೂ ಬೇಧವಿಲ್ಲದೆ ಪಾಠ ಹೇಳಬೇಕು; ಅನಂತರ ಬಡವನಾಗಲಿ ಐಶ್ವರ್ಯವಂತನಾಗಲಿ ತನಗೆ ಶಕ್ತಿ ಇದ್ದಷ್ಟು ಮಾತ್ರ ಗುರು ದಕ್ಷಿಣೆ ಅರ್ಪಿಸಬೇಕು; ಎಂದರು. ಆದರೂ ಗುರುವಿನಲ್ಲಿ ಹಣದಾಸೆ ಇದ್ದರೆ ತೊಡಕು ಬಂದೀತು; ಗುರುವಿನ ಶೀಲ ಅತ್ಯುತ್ತಮ ತರದಿಲ್ಲದಿದ್ದರೆ ವಿದ್ಯೆಯ ಪೂರ್ಣ ಪ್ರಯೋಜನ ಬಾರದು. ಆದ್ದರಿಂದ ಜನರಲ್ಲೆಲ್ಲ ಅತೀವ ಉತ್ತಮ ರೀತಿಯಲ್ಲಿ ಧಾರ್ಮಿಕ ಜೀವನ ಬೆಳೆಸುವ, ಶೀಲವಂತ ಜೀವನ ನಡೆಸುವ, ತೀರಾ ಸರಳವಾದ ಸುಲಭವಾದ ಜೀವನದಲ್ಲಿ ತೃಪ್ತಿಪಡುವ, ಬ್ರಾಹ್ಮಣರು ಮಾತ್ರವೇ ವಿದ್ಯೆ ಕಲಿಸುವುದು ಧರ್ಮವಾಗಿ ಕೈಕೊಳ್ಳಬೇಕೆಂದು ವಿಧಿಸಿದರು. ಈ ಬ್ರಾಹ್ಮಣರೂ ಲೋಕದ ಹವ್ಯಾಸಗಳಿಂದ, ಜೀವನದ ತೊಡಕುಗಳಿಂದ, ತಮ್ಮ ಧ್ಯೇಯ ಬಿಡದಂತೆ, ಪ್ರತಿ ದಿನ ಪವಿತ್ರವಾದ ವೇದ ವೇದಾಂತಗಳ ಅಧ್ಯಯನದಿಂದ ತಮ್ಮ ಮನಸ್ಸಿನ ಶುದ್ಧತೆ ಬೆಳೆಸುತ್ತ ಬರುವುದೂ ಅವರ ಅವಶ್ಯ ಧರ್ಮ, ಎಂದು ವಿಧಿಸಿದರು. ಇವುಗಳೆಲ್ಲವುಗಳ ಪರಿಣಾಮವಾಗಿ ನಮ್ಮಲ್ಲಿ ಓದು ಸ್ವಲ್ಪವೂ ಕೆಡದೆ ಸಾವಿರಾರು ವರ್ಷ ಕಾಲ ಉತ್ತಮವೆಂಬ ಒಂದೇ ವರ್ಗದ್ದಾಗಿ ಉಳಿಯಿತು.

ಆದರೆ ಪಾಶ್ಚಾತ್ಯರ ದಾಸ್ಯ ಬಂದ ಮೇಲೆ ನಮ್ಮ ಈ ಪವಿತ್ರ ಭಾವನೆ ಬಲಹೀನವಾಯಿತು. ಓದಿನ ವಿಚಾರ ಈ ತರದ ಉತ್ತಮ ಭಾವನೆಯೇ ಇಲ್ಲದ, ಆದರೆ ಪ್ರಬಲ ಲೌಕಿಕ ಶಕ್ತಿ ಇತ್ತೀಚೆಗೆ ತುಂಬಾ ಬೆಳೆಸಿದ, ಪಾಶ್ಚಾತ್ಯರ ಕ್ರಮವೇ ಎಲ್ಲೆಲ್ಲೂ ಮಾನ್ಯವಾಗುತ್ತ ಬಂತು. ಅವರ ಓದಿನ ಉತ್ತಮ ಭಾಗ ಮಾತ್ರವಲ್ಲ; ಅವರಲ್ಲಿ ಇರುವ ಪಶು ಭಾವನೆಯ ದೃಷ್ಟಿಯೂ ನಮಗೆ ಮೇಲ್ಪಂಕ್ತಿಯಾಯಿತು!

ಈ ಮೇಲ್ಪಂಕ್ತಿಯಿಂದಾಗಿ ನಮ್ಮ ಬಾಲಕರ ವಿದ್ಯೆ ಈಗ ಆರಂಭವಾಗುವುದು ಬರೀ ಲೌಕಿಕ ವಾತಾವರಣದಲ್ಲಿ; ಅಥವಾ ನಮ್ಮ ಧರ್ಮದ ಮಹತ್ತು ತಿಳಿಯುವ ಶಕ್ತಿ ಇಲ್ಲದೆ, ಮಕ್ಕಳ ಮುಂದೆ ಅದರ ತಾತ್ಸಾರ ಬೀರುವ ಎಡೆಗಳಲ್ಲಿ. ಆರಂಭ ಉತ್ತಮ ಮುಹೂರ್ತದಲ್ಲಲ್ಲ; ತಾರೀಕುಪಟ್ಟಿ ನೋಡಿ. ದೇವರ ನಾಮದಿಂದಲ್ಲ; ಅರ್ಥವಿಲ್ಲದ, ಪ್ರಾಸಕ್ಕಾಗಿ ಹಂದಿ ಮಂದಿ ಒಂದು ಮಾಡುವ, ಪದಗಳ ಕಂಠ ಪಾಠದಿಂದ. ಕಲಿಸುವವರು ಹಣಕ್ಕಾಗಿ ಮಾತ್ರ

ಕಲಿಸುವುದು. ಕಲಿಯುವವರು ಅದನ್ನು ಗುರುಭಕ್ತಿ ಇಲ್ಲದೆ ಪಡೆಯುವುದು. ಅಕ್ಷರ ದೇವರಲ್ಲ; ಪತ್ರಿಕೆಯ ಬರಹ, ರಸ್ತೆಯ ಮೇಲಿನ ಚುನಾವಣೆಯ ಜಾಹೀರಾತಿನ ಬರಹ, ತುಂಬಾ ತುಳಿತಕ್ಕೆ ಸಿಕ್ಕುವ ಕಾಲ ಇದು.

ಈಗ, ಮಗ ಓದುವ ಓದಲ್ಲಿ ಎಷ್ಟೆಲ್ಲ ಹೊಲಸಿದೆ ಎಂದು ತಂದೆಗೆ ತಿಳಿಯಲು ಸಮಯವಿಲ್ಲ. ಏಕೆಂದರೆ ಅವನ ಗಡಿಬಿಡಿಯೆಲ್ಲ ಮಗನ ವಿದ್ಯೆಯ ಖರ್ಚಿಗೆ ಹಣ ಸಂಪಾದಿಸುವುದಕ್ಕಾಯಿತು. ಮಕ್ಕಳ ಓದಿನ ಮೇಲ್ವಿಚಾರ ಮಾಡುವ ಸರಕಾರಕ್ಕೆ ದೈವಿಕ ಭಾವನೆಗಳಾಗದು. ಯಂತ್ರವೇ ದೇವರು, ಅಣೆಕಟ್ಟೇ ದೇವರು, ಕಾರ್ಖಾನೆಯೇ ದೇವರು ಎಂದು ದೇವರೆಂಬ ಪವಿತ್ರ ಕಲ್ಪನೆಯನ್ನು ಕಲ್ಲು ಮಣ್ಣಿನ ಮಟ್ಟಕ್ಕೆ ಅದು ಎಂದೋ ಇಳಿಸಿಯಾಯಿತು. ನಮ್ಮ ದೇವಸ್ಥಾನಗಳು ಮನುಷ್ಯನ ಮನಸ್ಸಿನ ಧಾರ್ಮಿಕ ಹಸಿವನ್ನು ತಣಿಸಲು ಅತ್ಯಗತ್ಯ. ಆದರೆ ಪಶು ಮಟ್ಟದ ಭಾವನೆ ಮಾತ್ರ ಇರುವ ಸರಕಾರಕ್ಕೆ, ಜನರ ಶೀಲ ಉತ್ತಮವಾದರೆ ಮಾತ್ರ ದೇಶದಲ್ಲಿ ಬಡಸ್ಥಿಕೆ ಹೋದೀತೆಂಬ ಅರಿವು ಬಾರದಾಗಿದೆ. ಆದ್ದರಿಂದ ಅದಕ್ಕೆ ದೇವಸ್ಥಾನಗಳ ಹಣ ಬಡವರ ಹೆಸರಲ್ಲಿ ಸುಲಿಯುವ ಆಲೋಚನೆ! ಇಂತಹ ಸರಕಾರ ನಮ್ಮ ಓದನ್ನು ಇನ್ನು ಪುನಃ ಶುದ್ಧವಾಗಿರಿಸಲು ಯತ್ನಿಸುವ ಸಂಭವವಿಲ್ಲ. ಆದ್ದರಿಂದ ಈಗ ನಾವು ಸ್ವರಾಜ್ಯ ಪಡೆದಿರುವೆವಾದರೂ ಮುಂಚಿನ ಶುದ್ಧ ಓದಿನ ಕಾಲ ಪುನಃ ಖಂಡಿತ ಬಾರದು. ಸಾಮಾನ್ಯ ಜನರಲ್ಲಿ ಅಮಲಿಗಾಗಿ ರುಚಿ ಬೆಳೆದಾಯಿತು. ಇನ್ನು ಅವರು ಅದರ ಬಯಕೆ ಬಿಡುವ ಸಂಭವವಿಲ್ಲ. ಸ್ವಾರ್ಥಿಗಳು ಅಮೇಧ್ಯದ ಬರಹದ ಹಾಳು ಸಾಮರ್ಥ್ಯ ಉಪಯೋಗಿಸಲು ತುಂಬಾ ಕಲಿತಾಯಿತು. ಅವರೂ ಈ ಪ್ರಬಲ ಆಯುಧ ಬಿಸಾಡುವಂತಿಲ್ಲ. ಹಣದ ಮೋಹ ತುಂಬಾ ಬೆಳೆದು, ಎಲ್ಲೆಲ್ಲೂ ಅನ್ಯವರ್ಗದ ಓದಿಗೆ ಮೇರೆ ತಪ್ಪಿದ ಸನ್ಮಾನ ಬಂದುದು ಇನ್ನು ಕಡಿಮೆಯಾಗುವಂತಿಲ್ಲ.

ಆದುದರಿಂದ ನಮ್ಮ ಮಕ್ಕಳ ಓದಿನ ರಕ್ಷಣೆ ನಮ್ಮಿಂದ ಮಾತ್ರವೇ ಆಗಬೇಕಾಗಿದೆ. ಈ ವಾತಾವರಣದಲ್ಲಿ ನಮ್ಮ ಮಕ್ಕಳು ಪುನಃ ಪುನಃ ದಾರಿ ತಪ್ಪುವ ಪ್ರಸಂಗ ಹೆಚ್ಚು. ಆದರೂ ನಮ್ಮ ಧರ್ಮದಲ್ಲಿ, ಬ್ರಾಹ್ಮಣ್ಯದಲ್ಲಿ, ನಂಬಿಕೆ ಇರುವವರು ತಮ್ಮ ಜವಾಬ್ದಾರಿಯನ್ನು ತ್ಯಜಿಸ ಕೂಡದು. ಬ್ರಾಹ್ಮಣ್ಯಕ್ಕೆ ಪ್ರತಿಕೂಲವಾದ ಈ ಕಾಲದಲ್ಲೂ ನಮ್ಮ ಮಕ್ಕಳು ನಿಷಿದ್ಧ ಆಹಾರ ತ್ಯಜಿಸುವಂತೆ ನಾವು ಯತ್ನಿಸುವುದಿಲ್ಲವೆ? ಅಂತೆಯೇ ಅವರಲ್ಲಿ

ಹೊಲಸು ಓದನ್ನು ತ್ಯಜಿಸುವ ಶಕ್ತಿ ನಾವು ಖಂಡಿತ ಬೆಳೆಸಬೇಕು. ಇದನ್ನು ಧರ್ಮದಲ್ಲಿ ಭಕ್ತಿ ಇಟ್ಟು ಯತ್ನಿಸಿದರೆ ಸಫಲವಾದೇವು ಎಂದು ನನಗೆ ಅನ್ನಿಸುತ್ತದೆ.

ಇನ್ನೂ ಒಂದು ಅತಿ ಪ್ರಬಲವಾದ ಕಾರಣದಿಂದ ನಾವು ಮಕ್ಕಳಲ್ಲಿ ಪವಿತ್ರ ಓದಿಗಾಗಿ ಸೊಂಟ ಕಟ್ಟಬೇಕು. ಅದೇನೆಂದರೆ ಅರ್ಜುನ ಭಗವದ್ಗೀತೆಯಲ್ಲಿ ಹೇಳಿದಂತೆ ಕುಟುಂಬ ನಾಶದಿಂದ ಧರ್ಮ ನಾಶವಾಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಕುಟುಂಬ ನಾಶ ತುಂಬಾ ನಡೆಯುತ್ತಿದೆ. ನಮ್ಮಲ್ಲಿ ಆರಂಭವಾಗಿದೆ. ಇದಕ್ಕೆ ನಮ್ಮ ಧರ್ಮಕ್ಕೆ ಸರಿ ಬೀಳದ ಓದು ಮುಖ್ಯ ಕಾರಣವಾಗಿದೆ. ನಮಗೆ ಕುಟುಂಬ ನಾಶ ಖಂಡಿತ ಬೇಡವಾದದ್ದು; ಧರ್ಮ ನಾಶ ಎಷ್ಟಕ್ಕೂ ಆಗಕೂಡದ್ದು. ಈಗಿನ ಓದಿಗೂ ಕುಟುಂಬ ನಾಶಕ್ಕೂ ಸಂಬಂಧ ತಿಳಕೊಂಡು, ನಾವು ಕೆಲಸ ಮಾಡುವುದು ಅತ್ಯಗತ್ಯ.

## ೮. ಈ ಕಾಲದ ಓದಿಂದ ಕುಟುಂಬ ನಾಶ

ಮುಂಚಿನ ಕಾಲದಲ್ಲಿ ನಮ್ಮಲ್ಲಿ ತಂದೆಯಂತೆ ಮಗ, ಮೊಮ್ಮಗ, ಮರಿಮಗ, ತಮ್ಮ ವಿದ್ಯೆ ಒಂದೇ ಕ್ರಮದಲ್ಲಿ ನಡೆಸಿ, "ಉತ್ತಮ" ಎಂಬ ಒಂದೇ ವರ್ಗದ ಪುಸ್ತಕಗಳನ್ನು ಓದಿ, ಒಂದೇ ತರದ ವಾತಾವರಣದಲ್ಲಿ ಕೂಡಿ ಬೆಳೆದು, ಒಂದೇ ತರದ ಮನೋಭಾವನೆಯವರಾಗಿದ್ದು, ಒಂದೇ ರೀತಿಯ ಜೀವನ ನಡೆಸುತ್ತಿದ್ದರು. ಹೆಂಗುಸರೂ ಒಂದೇ ಕ್ರಮದ ಪಾತಿವ್ರತ್ಯ, ವಿಧೇಯತೆ, ಸಾಂಪ್ರದಾಯಿಕ ಕ್ರಮಗಳಲ್ಲಿ ವಿಶ್ವಾಸ, ಮುಂತಾದ ಒಂದೇ ಮಟ್ಟದ ದಾರಿಯಲ್ಲೇ ನಡೆಯುತ್ತಿದ್ದರು.

ಈಗ ಫಕ್ಕನೆ ಅದೆಲ್ಲ ನಾಶವಾಗುತ್ತಿದೆ. ಅದರ ಬದಲಿಗೆ, ತಂದೆಗೆ ಒಂದು ಮನೋಭಾವನೆ, ಮಗನಿಗೆ ಇನ್ನೊಂದು ಮನೋಭಾವನೆ, ತಂದೆಯ ಜೀವನ ಕ್ರಮ ಮಗನಿಗೆ ಸುಧಾರಿತವಲ್ಲದ್ದಾಗಿ ತೋರುವುದು, ಮಗನ ಕ್ರಮ ತಂದೆಗೆ ಧರ್ಮ ವಿರುದ್ಧವಾಗಿ ಕಾಣುವುದು, ಸೊಸೆಗೆ ಅತ್ತೆ ಮಾವಂದಿರಲ್ಲಿ ತಾತ್ಸಾರ, ಅವರ ಬಗ್ಗೆ ಅಸಡ್ಡೆ, ಎಲ್ಲೆಲ್ಲೂ ಹೆಚ್ಚುತ್ತಿದೆ. ಇದರಿಂದಾಗಿ ನಮ್ಮ ಧರ್ಮದ ಆಚರಣೆಗೆ ಬಹಳವಾಗಿ ಹಾನಿ ಒದಗುತ್ತಿದೆ.

ಈ ಅನಾಹುತಕ್ಕೆ ಬಹುಮಟ್ಟಿಗೆ ನಮ್ಮ ಈಗಿನ ಓದೇ ಕಾರಣವಾಗಿದೆ. ಏಕೆಂದರೆ ನಮ್ಮ ಭಾವನೆಯ ಒಳುಹಿನಂತೆ ನಮ್ಮ ಜೀವನ ರೂಪುಗೊಳ್ಳುತ್ತದೆ.

ದೇವರಲ್ಲಿ ಭಕ್ತಿಗೆ ಯಾವಾಗಲೂ ಮಹತ್ವ ಕೊಡುವವನು ತಾನೂ ಭಕ್ತನಾದಾನು. ಜಾತಿಯಲ್ಲಿ ತಿರುಳಿಲ್ಲ ಎಂದು ಭಾವಿಸುತ್ತಿರುವವನು, ಯಾವಳಾದರೂ ಅನ್ಯಜಾತಿಯ ರೂಪವತಿಯ ಆಕರ್ಷಣೆಗೆ ಸೋತು ಅವಳನ್ನು ಮದುವೆಯಾಗಿ ತನ್ನ ಜಾತಿ ತ್ಯಜಿಸಿಯಾನು. ಹಣದ ಮಹತ್ವಕ್ಕೆ ತುಂಬಾ ಬೆರಗಾದವನು ಕಳ್ಳಸಂತೆ, ಲಂಚ, ಜಿಪುಣತೆ ಪ್ರಯೋಗಿಸಿಯಾದರೂ ತುಂಬಾ ಹಣ ಕೂಡಿಸಿಯಾನು.

ಮಕ್ಕಳು ಬೆಳೆದಂತೆ, ಅವುಗಳ ಸುತ್ತಲಿನ ವಾತಾವರಣ ಮತ್ತು ಓದು, ಅವುಗಳ ಭಾವನೆಗಳನ್ನು ರೂಪಿಸುವವು. ಎಲ್ಲರನ್ನು ಸಮಾನ ಮಟ್ಟಕ್ಕಿಳಿಸುವ ಶಾಲೆಗಳಲ್ಲಿ, ವಿದ್ಯಾರ್ಥಿ ನಿಲಯಗಳಲ್ಲಿ, ಬಹಳ ಕಾಲ ಬೆಳೆದ ಮಕ್ಕಳಿಗೆ ಬ್ರಾಹ್ಮಣ್ಯದ ಮೇಲೆ ಅಭಿಮಾನ ನಾಶವಾದೀತು. ಅದಕ್ಕೆ ಬದಲಾಗಿ ಅವರಲ್ಲಿ ಸಾಮಾನ್ಯರ ಆಚಾರಗಳ ಮಟ್ಟ ಮಾತ್ರ ಉಳಿದೀತು. ಲೌಕಿಕ ವಿಚಾರಗಳನ್ನು ಮಾತ್ರ ಓದುತ್ತಿದ್ದರೆ ಧರ್ಮದಲ್ಲಿ ತಿರುಳಿಲ್ಲವೆಂಬ ಭಾವನೆ ಹೆಚ್ಚಾದೀತು. ಹಿಂದಿನ ಧರ್ಮಾಚಾರ ಅನಗತ್ಯವೆಂದು ತೋರೀತು.

ಭಾವನೆ ಬೇರೆಬೇರೆಯಾಗಿದ್ದವರಲ್ಲಿ ಅನ್ಯೋನ್ಯತೆ, ಗೌರವ, ಮಮತೆ, ಬೆಳೆಯದು. ಇದ್ದುದು ಬೇಗ ಬತ್ತುತ್ತ ಬಂದೀತು. ಕುಡುಕರಿಗೆ ಕುಡುಕರೆಂದರೆ ಪ್ರೀತಿ. ಗಾಂಜಾ ಸೇದುವವರಿಗೆ ಗಾಂಜಾ ಸೇದುವವರೆಂದರೆ ಪ್ರೀತಿ. ಕ್ರಿಕೆಟ್ ಆಟದ ಉತ್ಸಾಹಿಗೆ ಗಾಯನ ಪ್ರೇಮಿಯಲ್ಲಿ ಗೆಳೆತನ ಉಂಟಾಗದು. ಸಿನೆಮಾದಲ್ಲಿ ಹುಚ್ಚಿರುವ ಅಣ್ಣನಿಗೆ ಓದಲ್ಲಿ ಮುಳುಗಿರುವ ತಮ್ಮನ ಬಗ್ಗೆ ವಾತ್ಸಲ್ಯ ಅಷ್ಟಷ್ಟೇ. ಭಂಡವಾಳ ಸಾಂಪ್ರದಾಯ ಮೆಚ್ಚಿ, ಮಗನಿಗಾಗಿ ಲಕ್ಷಾಂತರ ರೂಪಾಯಿ ಕೂಡಹಾಕುತ್ತಿರುವ ತಂದೆಗೆ, ಸಮತಾವಾದಕ್ಕೆ ಮೆಚ್ಚಿ, ಅದನ್ನೆ ಸತತ ಪಠಿಸುವ ಮಗನ ರೀತಿ ಅತ್ಯಾಶ್ಚರ್ಯ ತೋರೀತು. ಮಗನಿಗಂತು ತಂದೆ ರಾಕ್ಷಸನಾಗಿ ಕಂಡಾನು. ಅಂತೆಯೇ ಹಳೆ ಕ್ರಮದ ತಂದೆಗೂ ಹೊಸತರದ ವಿದ್ಯೆ ಕಲಿತ ಮಗನಿಗೂ ಅನ್ಯೋನ್ಯತೆ ಇಲ್ಲದಾದೀತು. ಹೊಸಕ್ರಮದ ವಿದ್ಯೆಯ ವಿಪರೀತವಾಗಿ ಬೆಳೆದ ಬೇರೆ ಬೇರೆ ಭಾಗಗಳಲ್ಲಿ ಮುಳುಗಿರುವ ತಂದೆ, ಅಣ್ಣ, ತಮ್ಮಂದಿರಲ್ಲೂ ಭಿನ್ನ ಭಾವನೆಗಳು, ಅನ್ಯೋನ್ಯತೆ ಇಲ್ಲದಿರುವುದು, ಕಾಣಬಹುದು.

ಈ ತರದ ಭಿನ್ನಭಾವನೆಗಳ ಬೆಳವಣಿಗೆಗೆ ತುಂಬಾ ಆಸ್ಪದ ಕೊಡುವುದು ಮುಖ್ಯವಾಗಿ ಈಗಿನ ಅನ್ನ, ಅಮಲು, ಅಮೋಧ್ಯ ಓದು. ಅದರಿಂದಾಗಿ

ಕುಟುಂಬಗಳ ಐಕ್ಯಮತ್ಯ ಚೂರುಚೂರಾಗುತ್ತಿದೆ. ಪಾಶ್ಚಾತ್ಯ ದೇಶಗಳಲ್ಲಿ ಮುದಿ ತಂದೆತಾಯಿಗಳೊಡನೆ ಮಕ್ಕಳಿಗೆ ಹಿತವಾಗದು. ಆದ್ದರಿಂದ ಆ ಮುದುಕರಿಗೆ ಮಕ್ಕಳು ಮೊಮ್ಮಕ್ಕಳು ಎಂಬವರ ರಕ್ಷಣೆ, ಸಹಾಯ, ಮಮತೆ, ಏನೂ ಇಲ್ಲದಾಗಿ ಅವರು ಪ್ರತ್ಯೇಕವಿದ್ದು, ದೊಡ್ಡಿಯಲ್ಲಿನ ಮುದಿ ದನಗಳ ಜೀವನ ನಡೆಸಬೇಕಾಗಿದೆ. ಈಗಿನ ಓದಿನ ಪರಿಣಾಮವಾಗಿ ನಮ್ಮಲ್ಲೂ ಮುಂದೆ ಈ ಭಯಂಕರ ಗತಿ ಬಂದೀತೆಂಬ ಸೂಚನೆ ತೋರುತ್ತಿದೆ.

ಸಾಂಪ್ರದಾಯಿಕ ಕ್ರಮಗಳನ್ನು ಆಚರಿಸುತ್ತ ಬೆಳೆದ ತಂದೆತಾಯಿಗಳು ತಮ್ಮ ಮಗನ ಆಂಗ್ಲ ಕ್ರಮದ ಓದಿಗೆ ಅವನನ್ನು ಪರಊರಿಗೆ ಕಳುಹಿಸಿ, ತುಂಬಾ ಶ್ರಮದಿಂದ ಅವನ ಓದನ್ನು ನಡೆಸಿ, ಅವನು ತಮ್ಮ ಮಾತನ್ನು ಮೀರನು ಎಂದು ಎಣಿಸುತ್ತಿದ್ದಂತೆಯೇ, ಫಕ್ಕನೆ ಅವನ ವರ್ತನೆಯಲ್ಲಿ ಸಂಪೂರ್ಣ ಹೊಸ ರೂಪು ಕಾಣಲಾರಂಭಿಸುವುದುಂಟು. ಜಪ ಮಾಡದಿರಬೇಡ ಎಂದು ಅವರು ಹೇಳಿದರೆ, ಅರ್ಥವಾಗದ ಜಪ ನಿಷ್ಪ್ರಯೋಜನ ಎಂದಾನು; ನಮ್ಮ ಜಾತಿ ನಮಗೆ ಎಂದರೆ, ಮನುಷ್ಯರಿಗೆಲ್ಲ ಎರಡೇ ಕಾಲು ಎಂದಾನು. ಅವರ ಧರ್ಮ ಬೋಧನೆ ಒಂದೂ ಬೇಡವಾಗಿ ಬೆಳೆದಾನು. ಮುದಿ ಪ್ರಾಯದಲ್ಲಿ ಅವರಿಗೆ ಅವನದು ಎಂದೋ ಒಮ್ಮೊಮ್ಮೆ ಭೇಟಿ ಸಿಕ್ಕೀತು. ಆಗ ಕೂಡ ಅವನ ಮನೋರಾಜ್ಯದಲ್ಲಿ ತಮಗೆ ಸ್ಥಾನ ತೀರಾ ಅಲ್ಪಸ್ವಲ್ಪ ಎಂಬುದು, ಅವರಿಗೆ ತುಂಬಾ ವ್ಯಕ್ತವಾದೀತು.

ಇದಕ್ಕೆ ಕಾರಣವೇನೆಂದರೆ ತಂದೆತಾಯಿಗಳು ತಮ್ಮ ನಿತ್ಯ ಆಚಾರದ ದೃಷ್ಟಾಂತದಿಂದ, ತಮ್ಮ ಮಾತುಕತೆಗಳ ಬಲದಿಂದ, ತಮ್ಮ ಮನೆಯ ವಾತಾವರಣದಿಂದ, ಮಗನ ಮನೋರಾಜ್ಯದ ಮೇಲೆ ಬೀರಿದ ಪರಿಣಾಮಕ್ಕಿಂತ ಅದೆಷ್ಟೋ ಹೆಚ್ಚು ಪಾಲಲ್ಲಿ, ಅವನ ದೂರದ ವಿದ್ಯಾರ್ಥಿ ಜೀವನ, ಸಂಗಾತಿಗಳ ಮಾತುಕತೆ, ಮತ್ತು ಸಾವಿರಾರು ಗಂಟೆಗಳ ಹೊಸ ಓದು, ಅವನ ಭಾವನೆಗಳನ್ನು ಸಂಪೂರ್ಣ ಪ್ರತ್ಯೇಕವಾದ ದಾರಿಯಲ್ಲಿ ಬೆಳೆಸಿವೆ. ತಂದೆಮಕ್ಕಳನ್ನು ಒಟ್ಟು ಕೂಡಿಸುವ ಓದು ಈಗ ಇಲ್ಲವಾಗಿದೆ. ಬೇರೆ ಮಾಡುವ ಓದೇ ಎಲ್ಲೆಲ್ಲೂ ತುಂಬುತ್ತಿದೆ.

ಪಾಶ್ಚಾತ್ಯರು ತಮ್ಮ ಓದನ್ನು ಈ ಕುಟುಂಬ ನಾಶ ಮಾಡುವ ರಾಕ್ಷಸ ಮಟ್ಟಕ್ಕೆ ಈಗಾಗಲೇ ತುಂಬಾ ಬೆಳೆಸಿಯಾಯಿತು. ಅಲ್ಲಿ ಈಗ ಮಕ್ಕಳ ಪರವಾಗಿ ಅವರು ನಡೆಸುವ ವಿಪರೀತ ಶ್ರಮವೆಲ್ಲ, ಅನಂತರ ತಮ್ಮ ಮಕ್ಕ

ಳಿಂದ ತಿರಸ್ಕರಿಸಲ್ಪಡುವ ಪರಿಣಾಮಕ್ಕೆ ಮಾತ್ರ ತರುವುದು ಖಂಡಿತ ಎಂಬುದು ಅವರಿಗೆ ಗೊತ್ತಿದೆ. ಆದ್ದರಿಂದ ಮಕ್ಕಳ ಪರವಾಗಿ ತಾವು ನಡೆಸುವ ಶ್ರಮಕ್ಕೆ ಅರ್ಥವಿಲ್ಲ ಎಂದು ಅವರು ತೀರ್ಮಾನಿಸಬೇಕಿತ್ತು. ಅದಕ್ಕೆ ಬದಲಾಗಿ ತಮ್ಮ ಶ್ರಮಕ್ಕೆ ಒಂದು ಜಂಬದ ಧ್ಯೇಯ ಕೊಟ್ಟಿದ್ದಾರೆ. "ನಂತರ ಮಕ್ಕಳು ತಮಗೆ ತೋರಿದ ಯಾವ ದಾರಿಯಿಂದಲಾದರೂ ಸುಖದಿಂದಿರಲಿ; ಸಾಕು. ಅವರಿಗೆ ವಿದ್ಯೆ ಕೊಟ್ಟು ಬೆಳೆಸುವುದು ನಮ್ಮ ಕರ್ತವ್ಯ; ಅದನ್ನು ನಾವು ಮಾಡುತ್ತಿದ್ದೇವೆ" ಎಂಬುದು ಅವರ ಹೇಳಿಕೆ. ತಮ್ಮ ಮಾತು ಕೇಳದ ಮಕ್ಕಳ ಪರವಾಗಿ ನಮ್ಮಲ್ಲೂ ಅನೇಕ ತಂದೆತಾಯಿಗಳು ಈ ಪಾಶ್ಚಾತ್ಯ ಹಾಡನ್ನು ಹಾಡಲಾರಂಭಿಸಿದ್ದಾರೆ. ಮಾತ್ರವಲ್ಲ; ಈ "ಕರ್ತವ್ಯ"ಕ್ಕಾಗಿ ಕಳ್ಳಸಂತೆ, ಲಂಚ, ಮೋಸ, ಮುಂತಾದ ರೀತಿಗಳಲ್ಲೂ ತಮ್ಮ ಆತ್ಮಹತ್ಯೆ ಕೂಡ ನಡೆಸುತ್ತಿದ್ದಾರೆ. ತಮ್ಮ ಆತ್ಮ ಶ್ರೇಯಸ್ಸಿನ ಚಿಂತನೆಗೆ ಏನೂ ಸಮಯ ಹಾಕದೆ, ಫಕ್ಕನೆ ಬಿದ್ದು ಸಾಯುವವರೆಗೂ ಅವರಿಗಾಗಿ ದುಡಿಯುತ್ತಿದ್ದಾರೆ!

ಆದರೆ ಇದೆಲ್ಲ ನಿಜಕ್ಕೂ ಕರ್ತವ್ಯವಲ್ಲ; ಈ ಕರ್ತವ್ಯದ ಮಾತೆಲ್ಲ ದೊಡ್ಡ ಆತ್ಮ ವಂಚನೆ ಮಾತ್ರ ಆದೀತು. ಪ್ರಾಣಿಗಳು ತಮ್ಮ ಮರಿಗಳನ್ನು ತುಂಬಾ ಶ್ರಮವಹಿಸಿ ರಕ್ಷಿಸಿ; ಬೆಳೆಸಿ, ತಮ್ಮ ಮುಂದಿನ ಜೀವನ ನಡೆಸಲು ಅವಕ್ಕೆ ದಾರಿ ಕಲಿಸಿ, ಆ ಮೇಲೆ ಒಂದರಿಂದ ಇನ್ನೊಂದು, ಏನೂ ಪ್ರತಿಫಲ ಅಪೇಕ್ಷಿಸದೆ, ಬೇರೆಬೇರೆ ಆಗುತ್ತವೆ. ಅಲ್ಲಿ ಕರ್ತವ್ಯದ ಭಾವನೆ ರವಷ್ಟೂ ಇಲ್ಲ. ಆದರೂ ಆ ಕೆಲಸ ತಪ್ಪದೆ ನಡೆಯುತ್ತಿದೆ. ಏಕೆಂದರೆ ಪ್ರಕೃತಿ ಅಥವಾ ಮಾಯೆ ತನ್ನ ಸೃಷ್ಟಿಯ ಕೆಲಸ ಸರಾಗವಾಗಿ ಮುಂದುವರಿಯುತ್ತಿರಲೆಂದು ಎಲ್ಲಾ ಪ್ರಾಣಿಗಳ ಗಂಡಲ್ಲಿ ಹೆಣ್ಣಿಗಾಗಿ ಕಾಮುಕತೆ, ಹೆಣ್ಣಲ್ಲಿ ಮರಿಗಳ ಬಗ್ಗೆ ವಾತ್ಸಲ್ಯ, ಅವು ತಡೆಯಲಾರದಷ್ಟು ಧಾರಾಳವಾಗಿ, ತುಂಬಿದೆ. ಇದರಿಂದಾಗಿ ಪ್ರಕೃತಿಯ ಕೆಲಸ ನಿಲ್ಲದೆ ನಿರಾಯಾಸವಾಗಿ ಸಾಗುತ್ತಿದೆ.

ಮನುಷ್ಯರಲ್ಲೂ ಬಹು ಮಟ್ಟಿಗೆ ಈಗ ಮಕ್ಕಳು ಹುಟ್ಟುವುದು ಬೇಕೆಂದಲ್ಲ; ಮಾಯೆಯ ಈ ಪ್ರಬಲ ಶಸ್ತ್ರವಾದ ತಡೆಯಲಾರದ ಕಾಮುಕತೆಯಿಂದಾಗಿ. ಆದರೂ ಆ ಮಕ್ಕಳ ಮೇಲೆ, ಲೋಕಕ್ಕೆ ಅನ್ಯಾಯ ಮಾಡಿಕೂಡ ಅವುಗಳ ಹೊಟ್ಟೆ ಹೊರೆಯುವಷ್ಟು ಮೋಹ ಇರುವುದು ಈ ಮಾಯಾ ಜಾಲದಿಂದಲೇ ಆಗಿದೆ. ನಾವು ನಮ್ಮ ಮಕ್ಕಳಿಗೆ ಕೊಡುವ

ವಿದ್ಯೆಗೂ ಪ್ರಾಣಿಗಳು ತಮ್ಮ ಮರಿಗಳಿಗೆ ಕೊಡುವ ವಿದ್ಯೆಗೂ ಅಜಗಜಾಂತರ ವ್ಯತ್ಯಾಸವಿದೆ ಎಂದು ಅನೇಕರು ಭಾವಿಸಬಹುದು. ಆದರೆ ಪ್ರಾಣಿಗಳಂತೆಯೇ ನಾವು ಕೊಡುವ ತರಬೇತಿಯೂ ಅನಂತರ ನಮ್ಮ ಮಕ್ಕಳು ಸ್ವತಂತ್ರರಾಗಿ ತಮ್ಮ ಹೊಟ್ಟೆಯ ಪಾಡನ್ನು ನಡೆಸಲಿ, ಸಂಸಾರ ಹೂಡಿ ಹೆಂಡತಿ ಮಕ್ಕಳನ್ನು ಬೆಳೆಸುವ ಶಕ್ತಿ ಪಡೆಯಲಿ, ಎಂಬುದೇ ಆಗಿದೆ. ಅವರು ಮುಕ್ತಿ ಪಡೆಯಲಿ ಎಂಬ ಬಗ್ಗೆ ಅವರಿಗೆ ಇಂಜಿನಿಯರಿಂಗ್, ಮುಂತಾದ ಲೌಕಿಕ ವಿದ್ಯೆ ಯಾರೂ ಕಲಿಸುವುದಲ್ಲವಷ್ಟೆ!

ಆದರೆ ಮಾನವ ಮಟ್ಟದ ಸಂಸಾರದಲ್ಲಿ ಪ್ರಕೃತಿಯು ಇನ್ನೂ ಒಂದು ಹೊಸ ಕೆಲಸ ಸಾಧಿಸುತ್ತಿದೆ. ಹಿಂದಿನ ಜನ್ಮದಲ್ಲಿ ಪಡಕೊಂಡ ಋಣದ ಸಾಲ, ಪಿತೃಗಳಿಂದ ಮಕ್ಕಳಿಗೆ ಈಗ ಬಡ್ಡಿ ಕೂಡ ತಿರುಗಿ ಸಲ್ಲುವಂತೆ ಮಾಡುತ್ತದೆ. ಆ ಹಳೆಯ ಸಾಲ ಮುಗಿಸಲಿಕ್ಕೆ ಪ್ರಕೃತಿಯು ನಿರ್ಧರಿಸಿದ ಅಸಲು ಮತ್ತು ಬಡ್ಡಿ ಎಂದರೆ, ನ್ಯಾಯದಲ್ಲಿ ನಡೆಸುವ ಜೀವನದಿಂದ ಮಕ್ಕಳ ರಕ್ಷಣೆ ಮತ್ತು ಲೌಕಿಕ ಜೀವನಕ್ಕೆ ತರಬೇತಿ. ಆದರೆ ಅನೇಕರು ಈ ಸಾಲ ತೀರಿಸಲೆಂದು ಅನ್ಯಾಯದ ಅಧರ್ಮದ ಜೀವನ ನಡೆಸಿ ಮಕ್ಕಳಿಗೆ ಚಕ್ರಬಡ್ಡಿ ತೆತ್ತು, ಸಾಲದ ಗೊಂದಲ ಇನ್ನೂ ವಿಸ್ತಾರ ಮಾಡಿಕೊಳ್ಳುತ್ತಿದ್ದಾರೆ. ಇದು ಪಶುಗಳು ಕೂಡ ಮಾಡದ ಮೂರ್ಖತನ!

ಅಂತೂ, ಮರಿಗಳು ರೆಕ್ಕೆ ಬಂದೊಡನೆ ಹಾರಿಹೋಗಲಿ ಎಂಬಂತೆಯೇ ನಮ್ಮ ಮಕ್ಕಳನ್ನೂ ನಾವು ತರಬೇತು ಮಾಡುವುದಾದರೆ, ಅದು ತೀರಾ ಪಶುಗಳ ಕ್ರಮ ಮಾತ್ರವಾಯಿತು. ಮಾನವನ ಹಿರಿಮೆ ಎಂದರೆ ಅವನಿಗೆ ಪಶುಗಳಲ್ಲಿಲ್ಲದ ಧಾರ್ಮಿಕ ಬುದ್ಧಿ ಇರುವುದು. ಆದರಿಂದಾಗಿ ಅವನಿಗೆ ತನ್ನ ಆತ್ಮ ಶ್ರೇಯಸ್ಸಿನ ದಾರಿ ಹಿಡಿಯುವ ಯೋಗ್ಯತೆ ಇರುವುದು. ತನ್ನ ದೇಹಕ್ಕೆ, ಮನಸ್ಸಿಗೆ, ಮಾತ್ರವಲ್ಲ, ಬುದ್ಧಿಗೆ, ಆತ್ಮಕ್ಕೆ, ಲಕ್ಷಕೊಡುವ ಹಿರಿಮೆ ಅವನಲ್ಲಿ ಇದೆ. ಆದ್ದರಿಂದ ತನ್ನ ಮಕ್ಕಳಿಗೂ ಬರೇ ಹೊಟ್ಟೆಹೊರೆಯುವ ದಾರಿ ಕಲಿಸುವುದು ಮಾತ್ರವಲ್ಲ; ಆತ್ಮದ ಅರಿವು, ದೈವದಲ್ಲಿ ಭಕ್ತಿ, ಧರ್ಮದ ದಾರಿಗಳಲ್ಲಿ ಆಸಕ್ತಿ, ಉಂಟುಮಾಡುವುದೂ ಅವನಿಗೆ ಸಾಧ್ಯ. ಅದಕ್ಕಾಗಿ ಮಕ್ಕಳ ಎದುರು ತನ್ನ ಜೀವನ ಧಾರ್ಮಿಕ ಕ್ರಮದಲ್ಲಿ ಮಾತ್ರವೇ ನಡೆಸಿ, ತನ್ನ ಆಚಾರ, ಮಾತು, ಧ್ಯೇಯಗಳಿಂದ ಅವರಲ್ಲಿ ಧರ್ಮದಲ್ಲಿ ಶ್ರದ್ಧೆ ಹುಟ್ಟಿಸುವುದು ಸಾಧ್ಯ. ಅಥವಾ ಮಕ್ಕಳನ್ನು ತಮ್ಮ ಮನೆ

ಗಿಂತಲೂ ಪವಿತ್ರವಾದ ಗುರುಕುಲಕ್ಕೆ ಕಳುಹಿಸಿ, ಅವರಿಗೆ ಧಾರ್ಮಿಕ ಜೀವನ ಕಲಿಸಬಹುದು.

ಹೀಗೆ ಯಾರು ನಮಗೆ ಬರೀ ಲೌಕಿಕ ಜೀವನಕ್ಕೆ ಸಹಾಯ ಮಾಡುವುದು ಮಾತ್ರವಲ್ಲ; ಧಾರ್ಮಿಕ ದಾರಿ ತುಳಿಯಲು ಸಹ ಕಲಿಸುತ್ತಾರೋ ಅವರು ಬರೀ ಋಣಾನುಬಂಧವೆಂಬ ಲೆಕ್ಕಾಚಾರದ ಮಟ್ಟವನ್ನು ದಾಟಿ, ಪವಿತ್ರ ದೈವಿಕ ಮಟ್ಟ ಏರಿದಂತಾದಾರು. ಆದ್ದರಿಂದಲೇ ಧರ್ಮಿಷ್ಟಕುಲಗಳಲ್ಲಿ ಮಕ್ಕಳಿಗೆ ತಂದೆತಾಯಿಗಳ ಬಗ್ಗೆ "ಮಾತೃದೇವೋ ಭವ"; "ಪಿತೃದೇವೋ ಭವ", ಎಂಬ ಭಾವನೆ ಇರಬೇಕು, ಎಂದು ನಮ್ಮ ಧರ್ಮ ಸಾರುತ್ತದೆ. ಹೊರತು, ಅವರು ತಮ್ಮ ಮುದಿ ತಂದೆತಾಯಿಗಳ ಕಷ್ಟಗಳ ಬಗ್ಗೆ ಸಂಪೂರ್ಣ ತಾತ್ಸಾರ ತೋರಿಸುತ್ತ, ತಾವು ಮಾತ್ರ ಸುಖಿಗಳಾಗಿ ಎಲ್ಲೆಲ್ಲೋ ಬೆಳೆದರೆ ಅಡ್ಡಿ ಇಲ್ಲ, ಎಂಬುದು ನಮ್ಮ ಧರ್ಮಕ್ಕೆ ತೀರಾ ವಿರುದ್ಧವಾದ ಕ್ರಮ. ಆದ್ದರಿಂದ ದೊಡ್ಡದಾದ ಮೇಲೆ ಅವರು ಏನು ಬೇಕಾದರೂ ಮಾಡಲಿ ಎಂದು ಹೇಳುತ್ತ ಮಕ್ಕಳನ್ನು ಬೆಳೆಸುವುದು ಮೂರ್ಖತನ..

ಈಗ ಪವಿತ್ರ ಗುರುಕುಲವಾಸದ ಅನುಕೂಲತೆ ಇಲ್ಲದ್ದರಿಂದ, ಮಕ್ಕಳಿಗೆ ಧರ್ಮದ ದಾರಿ ಹಿಡಿಸುವ ಸಂಪೂರ್ಣ ಭಾರ ತಂದೆತಾಯಿಗಳ ಮೇಲೆ ಬಿದ್ದಂತಾಯಿತು. ಮಕ್ಕಳಿಗೆ ಸ್ವಾಭಾವಿಕವಾಗಿ ಸ್ವಾರ್ಥತೆ ಹೆಚ್ಚು; ಧರ್ಮದಲ್ಲಿ ಬುದ್ಧಿ ಕಡಿಮೆ; ದೇವರ ಮೇಲೆ ವಾತ್ಸಲ್ಯದ ಕಲ್ಪನೆ ಹುಟ್ಟಬೇಕಷ್ಟೆ. ಆದರೆ ಮನೆಯಲ್ಲಿನ ತಂದೆತಾಯಿಗಳ ಕ್ರಮಬದ್ಧ ಧಾರ್ಮಿಕ ಜೀವನ, ಆಗಾಗ ಅಲ್ಲಿ ನಡೆಯುವ ಪೂಜೆ ಪುರಸ್ಕಾರಗಳಲ್ಲಿ ಮಕ್ಕಳನ್ನು ಹೆಚ್ಚುಹೆಚ್ಚಾಗಿ ಹೊಂದಿಸಿಕೊಳ್ಳುವಿಕೆ, ದಾನ, ಧರ್ಮ, ಜಪ, ಭಜನೆ, "ಅಮೃತ" ಗ್ರಂಥಗಳ ಓದು, ದೇವಸ್ಥಾನದಲ್ಲಿ ಸೇವೆಗಳು, ಮುಂತಾದವುಗಳ ಮೇಲ್ಪಂಗ್ತಿಯಿಂದ ಅವರು ಧಾರ್ಮಿಕ ಜೀವನದಲ್ಲಿ ಆಸಕ್ತಿ ಬೆಳೆಸಿಯಾರು. ತಂದೆತಾಯಿಗಳ ಬಗ್ಗೆ ಕೃತಘ್ನರಾಗಿ ಬಿಟ್ಟುಹೋಗುವ ಬಗ್ಗೆ, ಅವರು ತುಂಬಾ ವೃದ್ಧರು, ಅಶಕ್ತರು, ಲೌಕಿಕ ಕೆಲಸಕ್ಕೆ ನಿಷ್ಪ್ರಯೋಜಕರು ಆದಾಗ ಕೂಡ, ಅವರಲ್ಲಿ ಭಕ್ತಿ ಮಮತೆ, ಗೌರವ ಇಟ್ಟಾರು. ಹೀಗೆ ಕುಟುಂಬ ಚೂರಾಗದಂತೆ ನಡೆಯುವುದು ಮಾತ್ರವೇ ನಮ್ಮ ಧರ್ಮ ಹೇಳುವ ದಾರಿ; ಈ ಪುಣ್ಯಭೂಮಿಯಲ್ಲಿ ಎಂದೆಂದೂ ಶಾಶ್ವತವಾಗಿ ಉಳಿಯಬೇಕಾದ ದಾರಿ.

ಮುಂಚಿನ ಗುರುಕುಲ ಕ್ರಮದ ವಿದ್ಯಾಭ್ಯಾಸದಿಂದ ಹುಡುಗರು ಧಾರಾಳವಾಗಿ ಧಾರ್ಮಿಕ ಭಾವನೆ ಬೆಳೆಸಿ ಅನಂತರ ತಮ್ಮೊಡನೆ ತಂದೆತಾಯಿಗಳಿಲ್ಲದಿದ್ದರೂ ಧಾರ್ಮಿಕ ರೀತಿಯ ಕ್ರಮಬದ್ಧ ಜೀವನ ತಪ್ಪದೆ ನಡೆಸುವ ಶಕ್ತಿ ಹೊಂದುತ್ತಿದ್ದರು. ಈಗಿನ ವಿದ್ಯಾರ್ಥಿಗಳು ತುಂಬಾ ಸಮಯ ಲೌಕಿಕ ಓದಲ್ಲಿ, ಬ್ರಾಹ್ಮಣ್ಯದ ಭಾವನೆಯೇ ಇರದ ವಾತಾವರಣದಲ್ಲಿ, ನಡೆಸುವುದರಿಂದ ಅವರು ಆ ಮೇಲೆ ಕೂಡಲೆ ಸ್ವತಂತ್ರ ಜೀವನ ನಡೆಸಿದರೆ, ಬಹುಮಟ್ಟಿನ ಎಲ್ಲಾ ಧಾರ್ಮಿಕ ಬ್ರಾಹ್ಮಣ್ಯ ಸಾಂಪ್ರದಾಯಗಳೂ ಇಲ್ಲದವರಾದಾರು. ಅಂತಹ ಜೀವನದ ಕ್ರಮದಲ್ಲಿ ಒರೇ ಮೂರುತಲೆ ದಾಟುವುದರೊಳಗಾಗಿ ಮಕ್ಕಳಲ್ಲಿ ಬ್ರಾಹ್ಮಣ್ಯದ ಕುರುಹು ಹೆಚ್ಚು ಇಲ್ಲದಂತಾಗುವುದು ಕಾಣಬಹುದು. ನಮ್ಮ ಬ್ರಾಹ್ಮಣ್ಯದ ಶೀಘ್ರವಾದ ನಾಶಕ್ಕೆ ಇದು ಖಂಡಿತ ದಾರಿಯಾದೀತು.

ಆದರೆ ಲೌಕಿಕ ವಿದ್ಯೆ ನಡೆಸುತ್ತಿರುವ ಹುಡುಗನು ಧರ್ಮದ ಆಚರಣೆ ಇರುವ ತಂದೆತಾಯಿಗಳೊಡನೆ ಬೆಳೆದು ಆ ವಾತಾವರಣದಲ್ಲಿ ತಾನೂ ಧರ್ಮದ ಆಚರಣೆ ನಡೆಸಿ, ಆ ಮೇಲೂ ಅವರೊಡನೆ ಬಾಳಿದರೆ, ಅವರ ಸಾಂಪ್ರದಾಯಿಕ ಸತ್ಕರ್ಮಗಳಾದ ಜಪ, ಪೂಜೆ, ಸಂಸ್ಕಾರ, ಮಡಿ ಮೈಲಿಗೆ, ವ್ರತ, ನಿಯಮಗಳ ಪುನಃ ಪುನಃ ದೃಷ್ಟಾಂತದಿಂದ ಇನ್ನೂ ಹೆಚ್ಚಾಗಿ ಸಾಂಪ್ರದಾಯಿಕ ಜೀವನ ನಡೆಸಲು ಕಲಿತು, ಅನಂತರ ತಾನೂ ಉತ್ತಮ ಸಾಂಪ್ರದಾಯಿಕ ಬ್ರಾಹ್ಮಣ್ಯದ ಜೀವನ ಬೆಳೆಸಿಯಾನು. ನಮಗೆ ಬೇಕಾದುದು ಈ ಕ್ರಮ ಮಾತ್ರ. ಕುಟುಂಬ ನಶಿಸುವ ಜೀವನವಲ್ಲ.

ಈ ಕಾಲದಲ್ಲಿ ಮಕ್ಕಳಿಗೆ ಅಲ್ಪ ತಿಳಿವು ಇದ್ದಾಗಲೇ "ನಿಮ್ಮ ಸ್ವಂತ ಬುದ್ಧಿ ಉಪಯೋಗಿಸಿರಿ" ಎಂದು ಶಾಲೆಯಲ್ಲಿ ಕಲಿಸಿ, ಅವರ ಅಪಕ್ವವಾದ ತೀರ್ಮಾನಗಳಿಂದ ರೂಪಿತವಾದ ವರ್ತನೆಯಿಂದ ತುಂಬಾ ಕೇಡು ಉಂಟಾಗುತ್ತಿದೆ. ಅವರು ತಮ್ಮ ಏನೂ ಬೆಳೆಯದ ಅಲ್ಪತರದ ಭಾವನಾ ದೃಷ್ಟಿಯಿಂದ ಮುದಿ ತಂದೆತಾಯಿಗಳನ್ನು ತುಳನೆ ಮಾಡಿ, ಅವರು ಈ ಕಾಲಕ್ಕೆ ತಮ್ಮ ಜೀವನಕ್ಕೆ ತೊಡಕೆಂದು ತೀರ್ಮಾನಿಸಿಯಾರು. ಇದು ಪಾಶ್ಚಾತ್ಯರ ತಪ್ಪು ಕ್ರಮಗಳ, ತಪ್ಪು ವಿದ್ಯೆಯ, ಅನುಸರಣೆಯ ಫಲ. ಆ ಅಲ್ಪರಿಗೆ ತಮ್ಮ ತಂದೆತಾಯಿಗಳನ್ನು ಟೀಕಿಸುವ ಯೋಗ್ಯತೆ ಖಂಡಿತ ಇಲ್ಲ.

ಸನಾತನ ಧರ್ಮದ ಮಹತ್ತರವಾದ ಧ್ಯೇಯವೆಂದರೆ, ಭೀಷ್ಮ, ಶ್ರೀ ರಾಮಚಂದ್ರರು ತೋರಿಸಿದ ದಾರಿ "ತಂದೆ ವೃದ್ಧನಾದರೂ ಕಾಮುಕನಾಗಿ

ತಪ್ಪು ಭಾವನೆಯಲ್ಲಿದ್ದಾನೆ; ಅವನಿಂದ ನಮ್ಮ ಸುಖಕ್ಕೆ ಹಾನಿ ಬರುವಂತೆ ನಾವು ನಡೆಯುವುದು ಮೂರ್ಖತನ"; ಎಂತ ಅವರು ಸ್ವಲ್ಪವೂ ಭಾವಿಸಲಿಲ್ಲ. ತಂದೆ ದೇವರು, ಅವನ ಭಾವನೆಗೆ ಮಹತ್ವ ಕೊಡುವುದು ಮಾತ್ರ ತಮ್ಮ ಕರ್ತವ್ಯ; ಎಂದು ಅವರು ವರ್ತಿಸಿದರು. ತಂದೆಗಾಗಿ ಆಶ್ಚರ್ಯತರದ ತ್ಯಾಗ ಮಾಡಿದರು. ಅವರ ಪವಿತ್ರ ದೃಷ್ಟಾಂತ ನಮ್ಮ ದೇಶದಲ್ಲಿ ಜನಪ್ರಿಯವಾಗಿರುವ ವರೆಗೂ, ನಮ್ಮ ತಂದೆತಾಯಿಗಳು ನಮಗೆ ಪ್ರಿಯರಾಗಿರಬೇಕು. ಅವರ ಆಶೀರ್ವಾದ ನಮಗೆ ಅತ್ಯಗತ್ಯ ಎಂಬ ಭಾವನೆ ಉಳಿಯಬೇಕು.

ಆದ್ದರಿಂದ ಈಗಿನ ಓದಿನಲ್ಲಿ ಕುಟುಂಬ ನಾಶವನ್ನು ಪ್ರೇರಿಸುವ ಎಲ್ಲಾ ಭಾಗಗಳ ವಿಚಾರದಲ್ಲೂ ನಮಗೆ ಎಚ್ಚರಿಕೆ ಬೇಕು. ಆತ್ಮಕ್ಕಿಂತ ಹೆಚ್ಚು ದೇಹವಲ್ಲ. ಧರ್ಮಕ್ಕಿಂತ ಹೆಚ್ಚು ಲೌಕಿಕ ಓದಲ್ಲ. ಆದ್ದರಿಂದ ಲೌಕಿಕ ಓದಿಂದ ನಮ್ಮ ಧಾರ್ಮಿಕ ಜೀವನಕ್ಕೆ ಕಂಟಕ ಬರುವ ಭಾಗಗಳಲ್ಲಿ, ಹಾಗಾಗದಂತೆ ಮಾಡಲು ಬೇಕಾದ ಎಲ್ಲಾ ಉಪಾಯ, ತ್ಯಾಗ, ನಮ್ಮಲ್ಲಿ ಅಗತ್ಯ. "ಅಮೃತ" ತರದ ಓದು ಮಕ್ಕಳಿಗೆ ಪ್ರಿಯವಾಗಿ ಮಾಡುವುದು, ಅಮಲು ಮತ್ತು ಅಮೇಧ್ಯ ತರದವನ್ನು ಅವು ತ್ಯಜಿಸುವಂತೆ ಮಾಡುವುದು, ಹೊರಗಿನ ವಾತಾವರಣದ ಕಶ್ಮಲವನ್ನು ಆದಷ್ಟು ಮನೆಯ ವಾತಾವರಣದಿಂದ ತಿದ್ದುವುದು, ನಮ್ಮ ಅತ್ಯಗತ್ಯದ ದಾರಿಯಾಗಲಿ. ಮಕ್ಕಳು ಎಲ್ಲಾದರೂ ವಿದ್ಯೆ ಕಲಿತು ಧಾರಾಳ ಹಣ ಸಂಪಾದಿಸಲಿ ಎಂಬ ಧ್ಯೇಯ ನಮಗೆ ಹೇಳಿಸಿದುದೇ ಅಲ್ಲ.

ಹೀಗೆ ಮಾಡಿದರೆ ಬ್ರಾಹ್ಮಣರು ಹಿಂದೆ ಬೀಳರೆ? ಬಿದ್ದಾರು. ಆದರೆ ಬ್ರಾಹ್ಮಣ್ಯವೆಂಬುದು ಲೌಕಿಕ ದೃಷ್ಟಿಯಿಂದ ಮಾಡಿದವರ್ಗವಲ್ಲ; ಧಾರ್ಮಿಕ ದೃಷ್ಟಿಯಿಂದ ಮಾಡಿದುದು. ಮನಸ್ಸಿನ ಪರಿಶುದ್ಧತೆ, ಆತ್ಮದ ಅರಿವು, ಅದರ ಗುರಿ; ಬೇಂಕಲ್ಲಿ ನಮ್ಮದಾಗಿ ಕೂಡುತ್ತಿರುವ ಹಣದ ರಾಶಿಯಲ್ಲ. ಶೀಲದ ಬೆಳವಣಿಗೆಯ ಮಟ್ಟದಿಂದ ನಮ್ಮ ಜೀವನ ಅಳೆಯಬೇಕು; ಲೌಕಿಕ ಪದವಿಗಳ ಮಟ್ಟದಿಂದಲ್ಲ. ಆದಷ್ಟು ಮಟ್ಟಿಗೆ ಈ ಪವಿತ್ರಧ್ಯೇಯ ಉಳಿಸಿಕೊಳ್ಳುವ.

## ೯. ಓದನ್ನು ಹೇಗೆ ತಿದ್ದಬೇಕು?

ಓದುವುದರಲ್ಲಿ ತುಂಬಾ ಹರಿಯುತ್ತಿದ್ದ ಮನಸ್ಸಿನ ಪ್ರವಾಹವನ್ನು "ಕತೆ ಕಾದಂಬರಿ ಇನ್ನು ಓದಬೇಡ" ಎಂದು ಗದರಿಸಿ ಫಕ್ಕನೆ ತಡೆಯುವುದೆಂಪರೆ

ಹರಿಯುವ ಹೊಳೆಗೆ ದಂಡೆ ಹಾಕಲು ಯತ್ನಿಸಿದಂತೆ, ನಿಷ್ಪ್ರಯೋಜನವಾ ದೀತು. ಆದರೆ ಹರಿಯುವ ನೀರನ್ನು ಬೇರೆ ದಾರಿಗೆ ತಿರುಗಿಸುವುದು ಹೇಗೆ ಸುಲಭವೋ, ಹಾಗೆಯೇ ಅಲ್ಪತರದ ಓದಿನ ಬದಲಿಗೆ ಉತ್ತಮ ತರದ ಓದನ್ನು ಕೊಟ್ಟು ಅವುಗಳ ರುಚಿ ಹಿಡಿಸುವುದು ಸಾಧ್ಯವಾದ ದಾರಿ.

ಕತೆ, ಕಾದಂಬರಿ, ವರ್ತಮಾನ ಪತ್ರಿಕೆಗಳಂತೆ ಸುಲಭದಲ್ಲಿ ರುಚಿ ಸುವ "ಅಮೃತ" ವರ್ಗದ ಪುಸ್ತಕಗಳೂ ಕನ್ನಡದಲ್ಲಿ ಇವೆ. ಮುಂದೆ ಕೊಟ್ಟಿರುವ ಪಟ್ಟಿಯ ಪ್ರಥಮ ಭಾಗವೆಲ್ಲ ಇಂತಹ ಸುಲಭವಾದ, ಆರಂಭ ದಿಂದಲೂ ರುಚಿಕರವಾಗಿ ತೋರುವ, ಪುಸ್ತಕಗಳದ್ದು. ಹಿಂದೆ ಹೇಳಿದಂತೆ, ಅಮೃತ ವರ್ಗದ ಈ ಧಾರ್ಮಿಕ ಪುಸ್ತಕಗಳ ಸವಿ, ಓದಿದಂತೆ ಹೆಚ್ಚೀತು. ಆದುದರಿಂದ ಮಕ್ಕಳು ಅವನ್ನು ವರ್ಷಕ್ಕೊಮ್ಮೆ (ರಾಮನವಮಿ ಸಮಯದಲ್ಲಿ ರಾಮಾಯಣ ಮುಂತಾಗಿ) ಓದುವ ಅಭ್ಯಾಸ ಹಿಡಿಸಬೇಕು. ಈ ಮೂಲ ಪಟ್ಟಿಗೆ, ಉತ್ಸಾಹಿಗಳು ಇನ್ನೂ ಅನೇಕ ಪುರಾಣಗಳ, ದೇವರ ಭಕ್ತರ, ಪತಿವ್ರತಾ ಶಿರೋಮಣಿಗಳ, ಚರಿತ್ರೆಗಳ ಪುಸ್ತಕಗಳನ್ನು ಸೇರಿಸ ಬಹುದು. ಅಂತಹವು ಈಗ ಹಲವಾರು ಇವೆ. ಕತೆ, ನಾಟಕ, ಪದ್ಯ, ಅರ್ಥಸಹಿತ ಯಕ್ಷಗಾನಗಳೆಂಬ ಅನೇಕ ರೂಪುಗಳೂ ಸಿಕ್ಕುತ್ತವೆ. ನಮ್ಮ ಧರ್ಮದಿಂದ ಸ್ಫೂರ್ತಿಗೊಂಡು ಆದರ್ಶ ಕ್ಷತ್ರಿಯ ಜೀವನ ಬೆಳೆಸಿದ ರಾಜಸ್ಥಾನದ ವೀರರು, ಶಿವಾಜಿ ಮಹಾರಾಜ, ಜಾನ್ಸಿ ಲಕ್ಷ್ಮೀಬಾಯಿ, ಅಹಲ್ಯಾಬಾಯಿ ಹೊಳ್ಕರ, ಮುಂತಾದವರ ಚರಿತ್ರೆಯೂ ಮಕ್ಕಳ ಈಗಿನ ಓದಿನ ಅಪಾರ ಬಾಯಾರಿಕೆ ತಣಿಸಲು ಬೇಕಾದೀತು.

ಆದರೆ ನಮ್ಮ ಸನಾತನ ಧರ್ಮದಿಂದ ಸ್ಫೂರ್ತಿಗೊಳ್ಳದ ಅನ್ಯಮತೀ ಯರ ಚರಿತ್ರೆ, ಕತೆ, ಬೋಧನೆ, ಈ ಬಾಲಕರ ಪಾಲಿನ ಸಂಗ್ರಹಕ್ಕೆ ಬೇಡ. ನಮ್ಮ ಧರ್ಮದ ಮಹತ್ವ ಸ್ಪಷ್ಟವಾಗಿ ಧಾರಾಳವಾಗಿ ತಿಳಿಯುವ ಮುಂಚೆ, ಬೇರೆ ಓದಿಂದ ಅವರ ತಲೆ ಕರಡು ಮಾಡುವುದು ಬೇಡ.

ಇನ್ನು ನಮ್ಮ ಬಹುಮಟ್ಟಿನ ದೊಡ್ಡವರಿಗೆ ನಮ್ಮ ಧರ್ಮ ಗ್ರಂಥ ಗಳ ಸಂಸ್ಕೃತ ಮೂಲರೂಪ ತಿಳಿಯದು. ಅವುಗಳನ್ನೋದಿ ತಮ್ಮ ಧಾರ್ಮಿಕ ಜೀವನಕ್ಕೆ ಚೇತನವನ್ನೂ, ಸ್ಫೂರ್ತಿಯನ್ನೂ ಪಡೆಯಲಾರರು. ಆದರಿಂದಾಗಿ ತೀರಾ ಕುರುಡು ರೀತಿಯ, ಬರಡು ರೀತಿಯ, ಜೀವನ ನಡೆ ಸುತ್ತಿರುವರು. ಅವರು ತಮ್ಮ ಬರೇ ಸಾಂಪ್ರದಾಯಿಕ ಜೀವನದಿಂದ

ನಮ್ಮ ಧರ್ಮದ ಮಹತ್ತನ್ನೂ ಆಳವನ್ನೂ ತಿಳಿಯಲಾರದೆ ಇದ್ದಾರೆ. ನಾವು ಪ್ರತಿದಿನ ನಮ್ಮ ಧರ್ಮ ಗ್ರಂಥಗಳನ್ನು ಓದಿ ಹೊಸ ಚೇತನ ತುಂಬಿಸಿಕೊಳ್ಳುತ್ತಿರುವುದೂ, ಶ್ರದ್ಧೆ ಬೆಳೆಸುತ್ತಿರುವುದೂ, ಅಗತ್ಯವೆಂದು ನಮ್ಮ ಧರ್ಮವು ವಿಧಿಸಿದೆಯಾದರೂ ಆ ಅಭ್ಯಾಸ ನಿಂತು ಹೋಗಿ ನಮ್ಮ ಶ್ರದ್ಧೆ ತುಂಬಾ ಬತ್ತುತ್ತಿದೆ. ಆದುದರಿಂದ ಈಗ ಕನ್ನಡದಲ್ಲಿ ಸಿಕ್ಕುವ, ನಾವೆಲ್ಲ ಅತ್ಯಗತ್ಯವಾಗಿ ತಿಳಿಯಬೇಕಾದ, ಧರ್ಮದ ವಿಚಾರಗಳಿರುವ ಗ್ರಂಥಗಳನ್ನು, ನನ್ನ ಪಟ್ಟಿಯ ಎರಡನೆ ಭಾಗದಲ್ಲಿ ಸೇರಿಸಿರುವೆ.

ಬ್ರಾಹ್ಮಣರ ಹತ್ತೈವತ್ತು ಮನೆಗಳಿರುವಲ್ಲೆಲ್ಲ, ಅವರು ಒಟ್ಟು ಕೂಡಿ, ಈ ಪುಸ್ತಕಗಳನ್ನು ಅಗತ್ಯ ಸಂಗ್ರಹಿಸಿ, ತಾವು ಮತ್ತು ತಮ್ಮ ಮಕ್ಕಳು ಅವನ್ನು ಓದುವ ಅಭ್ಯಾಸ ಮಾಡಬೇಕು. ಅವುಗಳ ಅಲ್ಪ ಬೆಲೆಯ ಸಾವಿರಾರು ಪಾಲು ಪ್ರಯೋಜನ ಅದರಿಂದ ಉಂಟಾಗದಿರದು. ಅವರು ತಮ್ಮ ಮಕ್ಕಳ ತಪ್ಪು ಓದಿಗೆ ಖರ್ಚು ಮಾಡುವ ಅತಿ ಸ್ವಲ್ಪ ಅಂಶ ಇದಕ್ಕೂ ಹಾಕಿ ಈಗಿನ ವಿದ್ಯೆಯ ಓದಿನ ಕೆಡುಕನ್ನು ತಿದ್ದುವ ಈ ಕೆಲಸ ಅಗತ್ಯ ಮಾಡಬೇಕು.

## ಬ್ರಾಹ್ಮಣರಿಗೆ ಕನ್ನಡ ಧಾರ್ಮಿಕ ಗ್ರಂಥಗಳ ಚಿಕ್ಕ ಪಟ್ಟಿ

### ಯುವಕರ ಭಾಗ.

| ಗ್ರಂಥ | | |
|---|---|---|
| ಶ್ರೀಮದ್ ವಾಲ್ಮೀಕಿ ಸಂಗ್ರಹ ರಾಮಾಯಣ: ದೇವುಡು | 3 | 00 |
| ಶ್ರೀ ರಾಮನ ದಿವ್ಯ ಕತೆ: ಸಿ. ರಾಜಗೋಪಾಲಾಚಾರಿ | 2 | 50 |
| ಸಂಗ್ರಹ ಭಾಗವತ: ದೇವುಡು | 3 | 00 |
| ವಚನ ಭಾರತ: ಎ. ಆರ್. ಕೃಷ್ಣ ಶಾಸ್ತ್ರಿ | 7 | 50 |
| ಶ್ರೀ ರಾಮಕೃಷ್ಣರ ಜೀವನ ಚರಿತ್ರೆ: ಶಿವರಾಮ ಕಾರಂತ | 6 | 00 |
| ಶ್ರೀ ರಾಮಕೃಷ್ಣ ಉಪದೇಶಾಮೃತ: ಸ್ವಾಮಿ ಶಂಭವಾನಂದ | 3 | 50 |
| ಮಹಾ ಭಕ್ತಿ ವಿಜಯ: ಶಿವರಾಮ ದಾಸ: ಅ. ನಾ. ಶಾಸ್ತ್ರಿ | 10 | 00 |

ಮೇಲಿನ ಪುಸ್ತಕಗಳನ್ನು ವರ್ಷಕೊಮ್ಮೆ ತಪ್ಪದೆ ಓದಬೇಕು.

| ಗ್ರಂಥ | | |
|---|---|---|
| ಬ್ರಹ್ಮಚರ್ಯವೇ ಜೀವನ: ಸ್ವಾಮಿ ಶಿವಾನಂದ | 3 | 00 |
| ನೀತಿಗಳ ನೆಲೆಗಟ್ಟು: ಚಿದಂಬರಯ್ಯ | 2 | 00 |
| ಆರ್ಯ ಕೀರ್ತಿ: ಚಿ. ವಾಸುದೇವಯ್ಯ (ಎರಡು ಭಾಗಗಳು) | 2 | 50 |
| ಭಕ್ತಿ ಯೋಗ: ಸ್ವಾಮಿ ವಿವೇಕಾನಂದ | 1 | 00 |
| ಕರ್ಮಯೋಗ: ಸ್ವಾಮಿ ವಿವೇಕಾನಂದ | 1 | 50 |

ಗಾಯತ್ರಿ ಮಹಾತ್ಮೆ: ಬ್ರಾಹ್ಮಣರು ಏನು ಓದಬೇಕು: ದೇವರ ಸ್ತೋತ್ರಗಳು: ಮತ್ತು ನಮ್ಮ ಪುರೋಹಿತರು: ಕೋಟ ವಾಸುದೇವ ಕಾರಂತ (ತತ್ಕಾಲಕ್ಕೆ)

**ದೊಡ್ಡವರು ಮೇಲಿನದಕ್ಕೆ ಸೇರಿಸಿಕೊಳ್ಳಬೇಕಾದ ಪುಸ್ತಕಗಳು.**

| | | |
|---|---|---|
| ಆರ್ಯ ಧರ್ಮ: ಸಿ. ಯನ್ ಶಾಸ್ತ್ರಿ (ಸಾಹಿತ್ಯ ಪರಿಷತ್ತು) | 2 | 50 |
| ನಾರದ ಭಕ್ತಿ ಸೂತ್ರ: ಸ್ವಾಮಿ ಸೋಮನಾಥಾನಂದ | 1 | 50 |
| ಮಿಂಚಿನ ನೋಟಕ್ಕೆ ಹಿಂದೂ ಧರ್ಮ: ಸ್ವಾಮಿ ನಿರ್ವೇದಾನಂದ | 2 | 50 |

ಭಗವದ್ ಗೀತೆ: ಮತ್ತು ಮುಖ್ಯ ಉಪನಿಷತ್ತುಗಳಲ್ಲಿ ಕೆಲವು (ಧಾರಾಳವಾದ ಸುಲಭವಾದ ಟೀಕೆ ಇರುವವು ಕನ್ನಡದಲ್ಲಿದ್ದರೆ ಸೇರಿಸಿಕೊಳ್ಳುವುದು.)

| | | |
|---|---|---|
| ಧರ್ಮ ವಿಜ್ಞಾನ: ಲಕ್ಷ್ಮೀನಾರಾಯಣ ಶಾಸ್ತ್ರಿ (ಶ್ರೀ ದ್ವಾರಕಾ ಜಗದ್ಗುರು ಸಂಸ್ಥಾನ; ದೂರ್ವಾಸಪುರಂ) | 0 | 75 |
| ಆರ್ಯ ಸಂಸ್ಕೃತಿ: ಶ್ರೀ ಶ್ರೀಧರ ಸ್ವಾಮಿಯವರು (ಶ್ರೀ ಶ್ರೀಧರ ಭಕ್ತ ಮಂಡಲಿ, ಸಾಗರ, ಶಿವಮೊಗ್ಗ) | 1 | 50 |
| ಸಂಧ್ಯಾ ಭಾಷ್ಯ: ಪುರೋಹಿತ ಶಂಕರನಾರಾಯಣ ಭಟ್ಟ, ಮಿತ್ತೂರು, ಪುತ್ತೂರು | 4 | 00 |
| ಮನುಸ್ಮೃತಿ: ಶ್ರೀನಿವಾಸ ಭಟ್ಟ, ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ (ತತ್ಕಾಲಕ್ಕೆ ಪ್ರತಿಗಳು ಇಲ್ಲ) | 6 | 00 |
| ಶ್ರೀಮದ್ವಾಲ್ಮೀಕಿ ರಾಮಾಯಣ: ಅಳಸಿಂಗರಾಚಾರ್ಯ | 27 | 50 |
| ಶ್ರೀಮದ್ಭಾಗತವು: ಅಳಸಿಂಗರಾಚಾರ್ಯ: 8 ಭಾಗಗಳು | 27 | 50 |
| ಭಾರತ ತೀರ್ಥ: ಮಾಸ್ತಿ ವೆಂಕಟೇಶ ಐಯ್ಯಂಗಾರ್ | 4 | 00 |

ಮನುಷ್ಯನ ಮಟ್ಟ ಅವನ ಓದಲ್ಲಿ, ಅವನ ಮಾತಿನಲ್ಲಿ, ಚೆನ್ನಾಗಿ ವ್ಯಕ್ತವಾದೀತು. ಪಶು ಜನ್ಮಗಳಿಂದ ಮೇಲಕ್ಕೆ ಬಂದಿದ್ದರೂ ಅವುಗಳಂತೆ ದೇಹದ ವ್ಯಾಪಾರಗಳ ವಿಚಾರ ಮಾತ್ರವೇ ಅಭಿಲಾಷೆ ಇರುವ ಪಶು-ಮನುಷ್ಯನು ತನ್ನ ಮಾತನ್ನೆಲ್ಲ ಮನೆ, ಊಟ, ನಿದ್ರೆ, ಮಕ್ಕಳು, ಹೆಂಡತಿ, ಆಸ್ತಿ, ಬೇಸಾಯ, ಬಟ್ಟೆ, ಆಟ, ಹಣ, ವ್ಯಾಪಾರ, ವಿಹಾರ ಮುಂತಾದವುಗಳಲ್ಲಿ ಮಾತ್ರವೇ ಕಳೆಯುವನು. ಇತರ ಮಾತೂ, ಓದೂ, ಆಲೋಚನೆಗಳೂ, ಅವನಿಗೆ ಏನೂ ರುಚಿಸವು.

ಆದರೆ ಮನಸ್ಸು, ಬುದ್ಧಿ, ಬೆಳೆಸಿದ ಮನುಷ್ಯ–ಮನುಷ್ಯನಿಗಾದರೆ, ವಿಜ್ಞಾನ, ರಾಜಕೀಯ ಪ್ರಶ್ನೆಗಳು, ದೇಶೋನ್ನತಿಯ ಯತ್ನ, ಕಲೆ, ಕವಿತೆ,

ಮುಂತಾದವುಗಳಲ್ಲಿ ಉತ್ಸಾಹ ಇದ್ದೀತು. ಅವುಗಳ ಬಗ್ಗೆ ಆಲೋಚನೆ ಮಾಡಿಯಾನು; ಇತರರೊಡನೆ ಚರ್ಚೆ ನಡೆಸಿಯಾನು.

ಧಾರ್ಮಿಕ ಜೀವನಕ್ಕಾಗಿ ಯತ್ನಿಸುವ ದೈವಿಕ–ಮನುಷ್ಯನು ದೇವರ ವಿಚಾರ, ಆತ್ಮೋನ್ನತಿಯ ವಿಚಾರ, ಯೋಚಿಸಿಯಾನು. ಶಾಸ್ತ್ರ ಹೇಳುವ ಮಾಯಾಜಾಲದ ದೃಷ್ಟಾಂತ ಎಲ್ಲೆಲ್ಲೂ ಕಂಡು ವೈರಾಗ್ಯವನ್ನು ತಂದು ಕೊಂಡಾನು. ತತ್ವಜ್ಞಾನದ ನಿಜತ್ವ ಕಾಣುತ್ತ ಸಂಯಮ, ಮನಸ್ಸಿನ ಶುದ್ಧತೆ, ಭಕ್ತಿ, ಅಭ್ಯಾಸಿಸಿಯಾನು. ಜ್ಞಾನ, ವಿವೇಕ ಬಯಸಿಯಾನು. ಅವನ ಮಾತಲ್ಲಿ ಪರಮಾರ್ಥದ ವಿಚಾರ ಪುನಃ ಪುನಃ ಬಂದೀತು.

ಬೆಳ್ಳುಳ್ಳಿ ತಿಂದವನ ತೇಗು ಅದರ ವಾಸನೆಯದೇ ಇರುವಂತೆ, ಈಗಿನ ತೀರಾ ಲೌಕಿಕ ಓದಿಂದಾಗಿ ಬಹು ಜನರ ಮಾತೆಲ್ಲ, ಪತ್ರಿಕೆಯಲ್ಲಿ ಬಂದ ವಿಚಾರ, ಸಿನೆಮದಲ್ಲಿ ಕಂಡ ವಿಚಾರ, ಕಾದಂಬರಿಯಲ್ಲಿ ಓದಿದ ವಿಚಾರ, ಹೊರತು ಅದಕ್ಕಿಂತ ಹೆಚ್ಚಿನದು, ತನ್ನ ಸ್ವಂತ ಮನನ ಶಕ್ತಿಯ ಫಲದ್ದು, ಆಳವಾದ ವಿಚಾರದ್ದು, ಏನೂ ಇರುವುದಿಲ್ಲ. ಬ್ರಾಹ್ಮಣರ ಮಟ್ಟಿಗಾದರೂ ಅದು ಬದಲಾಗಬೇಕು: ಮೇಲ್ಮಟ್ಟಕ್ಕೆ ಬರಬೇಕು.

ಅಮೃತ ಗ್ರಂಥಗಳ ಓದು ನಮ್ಮ ಹೆಣ್ಣು ಮಕ್ಕಳಿಗೆ ಈ ಕಾಲ ದಲ್ಲಿ ಇನ್ನೂ ಒಂದು ಕೆಲಸಕ್ಕೆ ಅತ್ಯಗತ್ಯ. ಈಗಿನ ಜೀವನ ಕ್ರಮದ ಹೋರಾಟಕ್ಕಾಗಿ ಗಂಡಸರು ಅನ್ನ ಭಾಗದ ಓದಲ್ಲಿ ಮುಳುಗಿದ್ದು, ಅಮೃತ ಮಟ್ಟದ ಓದನ್ನು ತೀರಾ ಮರೆತಾರು. ಆದರೆ ಹೆಂಗುಸರಿಗೆ ಅನ್ನ ಭಾಗದ ಓದು ಅಷ್ಟೆಲ್ಲ ಅವಶ್ಯಕವಿಲ್ಲ. ಅಮೃತದ್ದನ್ನು ಮನೆಯ ವಾತಾವರಣದಲ್ಲಿ ತುಂಬಿಸುತ್ತಿದ್ದು ಗಂಡಸರಿಗೆ ಧರ್ಮದಲ್ಲಿ ಬುದ್ಧಿ, ಶಾಸ್ತ್ರೀಯ ಸಂಸ್ಕಾರಗಳಲ್ಲಿ ಶ್ರದ್ಧೆ, ಮನೆಯಲ್ಲಿ ಸದಾಚಾರ, ಬೆಳೆಯುವಂತೆ ಮಾಡುವ ಹೊಣೆ ಮುಂಚಿಗಿಂತ ಹೆಚ್ಚಾಗಿ ಅವರು ವಹಿಸುವುದು ಅಗತ್ಯ. ಏಕೆಂದರೆ ಮುಂಚೆ ಎಲ್ಲಾ ಮಕ್ಕಳೂ ಒಟ್ಟಿದ್ದು, ಮುದಿ ತಂದೆತಾಯಿಗಳು ಅವರೊಡನಿರುತ್ತಿದ್ದು, ತಮ್ಮ ಜಪತಪ, ಪೂಜೆ, ಆಚಾರ, ವೈದಿಕ ಕರ್ಮಗಳು, ಸುತ್ತಲಿನ ಘಟನೆಗಳ ಬಗ್ಗೆ ಧಾರ್ಮಿಕ ದೃಷ್ಟಿಯ ತುಲನೆ, ಎಲ್ಲಾ ನಡೆಸುತ್ತಿದ್ದರು. ತನ್ಮೂಲಕ ಧಾರ್ಮಿಕ ಜವಾಬ್ದಾರಿ ಬೇಕಾದಷ್ಟು ಇನ್ನೂ ಬೆಳೆಯದ ಯುವಕರನ್ನು, ತಮ್ಮ ದಾರಿಗೆ ತಿದ್ದುತ್ತಿದ್ದರು. ಈಗ ತನ್ನ ಸಂಸಾರದ ಮೇಲೆ ದೈವಕೃಪೆ ಬೆಳೆಯಬೇಕಾದರೆ ಗೃಹಿಣಿ ಆ ಜವಾಬ್ದಾರಿ ತಾನೇ ಹೊರಲು ಯೋಗ್ಯತೆ ಪಡೆಯಬೇಕು. ಇದಕ್ಕೆ ಈ ಉತ್ತಮ ಓದು ಬೇಕು.

ಅಥವಾ ದುರ್ದೈವದಿಂದ ಅವಳು ಪತಿಯನ್ನು ಕಳಕೊಂಡರೆ, ಅನಂತರ ಪರಿಶುದ್ಧ ಜೀವನ ನಡೆಸಲು ಬೇಕಾದ ಶುದ್ಧ ಮನೋಭಾವಕ್ಕೆ "ಅಮೃತ"ದ ಓದು ಮಾತ್ರವೇ ಊರುಗೋಲಾಗಿ ನಿಂತೀತು. ಎಲ್ಲಿ ಕಂಡರೂ ಕಾಮುಕ ದೃಶ್ಯಗಳು, ಹೊಲಸು ಓದು, ನಿರ್ಭೀತರಾದ ಪಾಪಿಗಳ ತೀಕ್ಷ್ಣ ನೋಟ, ಎಲ್ಲಾ ಎದುರಿಸುವಾಗ, ತಾತ್ಸಾರದಿಂದ ಅವನ್ನು ತ್ಯಜಿಸಿ, ದೇವರ ಭಕ್ತಿ ಬೆಳೆಸಿ, ಅವನಿಂದ ಪವಿತ್ರ ಜೀವನಕ್ಕೆ ಶಕ್ತಿ ಪಡೆಯುವಂತೆ ಅವಳು ಸ್ಥಿರ ಅಸ್ತಿವಾರ ಹಾಕುವುದು ಅಗತ್ಯ. ಅದಕ್ಕಾಗಿ ಅವರಿಗೆ ಬೇಕಾದ ಅತ್ಯುತ್ತಮ ತರಬೇತಿ ಕೊಡುವುದು ಎಲ್ಲಾ ತಂದೆತಾಯಿಗಳ ಕರ್ತವ್ಯ. ಮುಂಚಿನ ಕ್ರಮದಂತೆ ಅವರ ರೂಪನ್ನು ಮರೆಸುವುದು, ಅಪರಿಚಿತರ ಅಶ್ಲೀಲ ವರ್ತನೆ ಇಲ್ಲದ, ಸೌಮ್ಯ ತರದ ಹಳ್ಳಿಗಳ ಮರೆಯಾದ ವಾತಾವರಣದಲ್ಲಿ ಅವರಿರುವುದು, ಇನ್ನು ಅನೇಕರಿಗೆ ಸಿಗಲಾರದ ರಕ್ಷಣೆ, ಅದರ ಕೆಲಸವೆಲ್ಲ ಈ ಅಮೃತ ಓದಿಂದ ಸಿಕ್ಕುವ ಹೊಸ ರಕ್ಷಣೆಯಿಂದಾಗಬೇಕು. ನಮ್ಮ ಹೆಣ್ಣುಮಕ್ಕಳು ಲೌಕಿಕ ಓದನ್ನು ತುಂಬಾ ಮುಂದರಿಸುವುದು ಉತ್ತಮವಲ್ಲ. ಅದರ ಬದಲು ಮದುವೆಯ ಕಾಲದ ವರೆಗೆ ಈಗ ಸಿಕ್ಕುವ ಹೆಚ್ಚಿನ 5–6 ವರ್ಷದಲ್ಲಿ, ಆದಷ್ಟು ಧಾರ್ಮಿಕ ಗ್ರಂಥಗಳ ಪರಿಚಯ, ಧಾರ್ಮಿಕ ಶಿಕ್ಷಣ, ಹೊಂದಬೇಕು.

ಈ ಪುಸ್ತಕದಲ್ಲಿ ವಿವರಿಸಲು ಯತ್ನಿಸಿದ ವಿಚಾರ ಹೊಸತಾಗಿದ್ದು ಅನೇಕರಿಗೆ ರುಚಿಸದಿದ್ದೀತು. ಆದರೆ ಅದನ್ನು ತುಂಬಾ ಯೋಚಿಸಿ ಬರೆದದ್ದು. ಯೋಚಿಸದೆ ತೆಗೆದುಹಾಕುವುದು ಬೇಡ. ಧಾರ್ಮಿಕ ಜೀವನ ಬೇಕೆನ್ನುವ ಬ್ರಾಹ್ಮಣರು ಈಗಿನ ಓದಿನ ವಿಚಾರ ಆಲೋಚನೆ ನಡೆಸಿದರೆ ಅವರು ನಾನು ಹೇಳುತ್ತಿದ್ದ ತೀರ್ಮಾನಕ್ಕೆ ಬಂದಾರೆಂದು ನನಗೆ ಅನ್ನಿಸುತ್ತದೆ.

ಅಮಲು ಓದು ನಮಗೆ ಹೇಳಿಸಿದುದಲ್ಲ. ಸಮಯ ಹಾಳು ಮಾಡುತ್ತದೆ; ಕರ್ತವ್ಯದಿಂದ ಸೆಳೆಯುತ್ತದೆ. ಅದನ್ನು ಸಂಪೂರ್ಣ ವರ್ಜಿಸುವ ಶಕ್ತಿ ಬ್ರಾಹ್ಮಣರು ಬೆಳೆಸಬೇಕು. ಪತ್ರಿಕೆಗಳ ಮಟ್ಟಿಗೆ, ಲೌಕಿಕ ವೃತ್ತಿಯಲ್ಲಿದ್ದವರು ತಮಗೆ ಅನ್ವೈಸುವ ಅತ್ಯಗತ್ಯವಿದ್ದ ಭಾಗಗಳನ್ನು ಆದಷ್ಟು ಬೇಗ, ಕಡಿಮೆ ಸಮಯದಲ್ಲಿ, ಓದಿ ಮುಗಿಸಲು ಕಲಿಯಬೇಕು. ಅಮೇಧ್ಯ ಓದನ್ನು ಸಂಪೂರ್ಣ ತ್ಯಜಿಸಬೇಕು. ಅದನ್ನು ಅಲ್ಪಸ್ವಲ್ಪವಾಗಿ ಕಂಡೇ, ಅದರ ಲಕ್ಷಣ ತಿಳಿದು, ಅದರ ಬಗ್ಗೆ ತಾತ್ಸಾರ ಹೊಂದುವ ಶಕ್ತಿ ಸ್ವಾಭಾ

ವಿಕವಾಗಿ ನಮ್ಮಲ್ಲಿ ಉಂಟಾಗಬೇಕು. ಉತ್ತಮ ಓದು ಮಾತ್ರ ನಡೆಸಿದರೆ ಅದರ ಫಲವಾಗಿ ಇದು ಸಾಧ್ಯವಾದೀತು. "ಅನ್ನ" ಭಾಗದ ಓದಲ್ಲಿ ಜೀವನ ನಡೆಸುವ ಮಟ್ಟಕ್ಕೆ ಬೇಕಾದುದು ಅಗತ್ಯ. ಆದರೆ ಅದಕ್ಕೆ ಪ್ರಥಮ ಸ್ಥಾನದ ಮನ್ನಣೆ ಎಂದೂ ಕೊಡಕೂಡದು. ಜೀವನವನ್ನು ತೀರಾ ಸುಲಭವಾಗಿ, ಸರಳವಾಗಿ, ಇಟ್ಟುಕೊಂಡಷ್ಟೂ ಈ ಅನ್ನ ಭಾಗದ ಓದು "ಉಪಾಯವಿಲ್ಲದ ಅವಶ್ಯಕತೆ: ಆದರೆ ಅದರಲ್ಲಿ ನಾವು ಮುಳುಗಿ ನಾಶವಾಗದಂತೆ ಜಾಗ್ರತೆ ಇರಬೇಕು." ಎಂಬ ಭಾವನೆ ಯಾವಾಗಲೂ ಬಂದೀತು. ಆತ್ಮಶ್ರೇಯಸ್ಸು ಬ್ರಾಹ್ಮಣನ ಜೀವನದ ಮುಖ್ಯ ಧ್ಯೇಯ. ಲೌಕಿಕ ಜೀವನದಿಂದ ಆದಷ್ಟು ಸಡಿಲು ಮಾಡಿಕೊಂಡು ಧರ್ಮದ ಭಾಗ ಆದಷ್ಟು ಹೆಚ್ಚು ಮಾಡಿಕೊಳ್ಳುವುದು ಮಾತ್ರವೇ ನಮಗೆ ತಕ್ಕುದಾದ ದಾರಿ. ಆ ದೃಷ್ಟಿಯಿಂದ ಯಾವಾಗಲೂ ಅಮೃತ ಓದಿಗೆ ಪ್ರಥಮ ಸ್ಥಾನ ಕೊಟ್ಟು ಅದರಿಂದ ಸ್ಫೂರ್ತಿ ಹೊಂದುತ್ತಿರಬೇಕು. ಜೀವನದ ಎಲ್ಲಾ ಭಾಗಕ್ಕೂ ಆ ಓದು ಮಾರ್ಗದರ್ಶಕವಾಗುವಂತಾಗಬೇಕು. ಆದರಲ್ಲೂ ಜೀವನದ ವಾರ್ಧಿಕ್ಯದ ಭಾಗದಲ್ಲಿ ಧಾರ್ಮಿಕ ಭಾಗವೇ ಪ್ರಾಧಾನ್ಯವಾಗಬೇಕು. ಸ್ವಧರ್ಮದ ಆಚರಣೆಯನ್ನು ಸಾಧ್ಯವಾದಷ್ಟು ನಮ್ಮ ಜೀವನದ ಮುಖ್ಯ ಗುರಿಯಾಗಿ ಮಾಡಿದರೆ ಆಗ ಅದು ನಮ್ಮನ್ನು ಆಶ್ಚರ್ಯಕರವಾದ ರೀತಿಯಲ್ಲಿ ರಕ್ಷಿಸೀತು. ಈ ಕಾಲದಲ್ಲೂ ದೇವರಲ್ಲಿ ಭಕ್ತಿ ಶ್ರದ್ಧೆ ತುಂಬಿಸಿ ಜೀವಿಸಲು ಸಾಧ್ಯ ಮಾಡೀತು. ಬ್ರಹ್ಮಣ್ಯೋ, ಬ್ರಾಹ್ಮಣೋ, ಬ್ರಾಹ್ಮಣಪ್ರಿಯ ಎಂದು ಕರೆಯಲ್ಪಡುವ ಭಗವಂತನು ನಮ್ಮನ್ನು ಧರ್ಮದ ದಾರಿ ಬಿಡದಂತೆ ನಡೆಸಲಿ.



## ಧರ್ಮಾರ್ಥ ಹಂಚುವವರಿಗೆ ದರಗಳು

ಗಾಯತ್ರೀ ಮಹಾತ್ಮೆ, 20 ಪ್ರತಿಗಳಿಗೆ

ಕ್ರಯ, ರೂ. 2·50 ರಿಜಿಸ್ಟರ್ಡ್ ಪೋಸ್ಟೇಜು ರೂ. 1·03

ಬ್ರಾಹ್ಮಣರು ಏನು ಓದಬೇಕು, 20 ಪ್ರತಿಗಳಿಗೆ

ಕ್ರಯ, ರೂ. 3·00 ರಿಜಿಸ್ಟರ್ಡ್ ಪೋಸ್ಟೇಜು ರೂ. 1·15

ಒಂದೊಂದು ಪುಸ್ತಕ 10 ಪ್ರತಿಗಳಿಗೆ

ಕ್ರಯ, ರೂ. 2·75 ರಿಜಿಸ್ಟರ್ಡ್ ಪೋಸ್ಟೇಜು ರೂ. 1·09

---

ಈ ಪುಸ್ತಕ ಧರ್ಮಾರ್ಥ ಪಡೆದವರು ದಯಮಾಡಿ ಇತರರಿಗೂ ಓದಲು ಕೊಡಿರಿ.

## ಇದು ಬ್ರಾಹ್ಮಣ ಸೇವಾ ಪುಸ್ತಕ ಮಾಲೆಯ ಐದನೆ ಪುಸ್ತಕ

ಈ ಪುಸ್ತಕವನ್ನು ಸನಾತನ ಧರ್ಮದ ಪ್ರಚಾರಕ್ಕಾಗಿ ಮತ್ತು ಬ್ರಾಹ್ಮಣ ಸಮಾಜದ ಸೇವೆಗಾಗಿ ಪ್ರಕಟಿಸಿದುದು. ಇದರಲ್ಲಿರುವ ವಿಚಾರವನ್ನು ನಮ್ಮ ಯುವಕರು ಅಗತ್ಯ ತಿಳಕೊಳ್ಳಬೇಕು ಎಂದು ಭಾವಿಸುವ ಉದಾರ ಬುದ್ಧಿಯುಳ್ಳ ಬ್ರಾಹ್ಮಣ ಮಹನೀಯರು ಮತ್ತು ಬ್ರಾಹ್ಮಣ ಸಂಸ್ಥೆಗಳು ತಮ್ಮ ಊರಿನ ಬ್ರಾಹ್ಮಣ ಮಕ್ಕಳಿಗೆ ಈ ಪುಸ್ತಕವನ್ನು ಧರ್ಮಾರ್ಥ ಹಂಚಲಿಕ್ಕೆ 20; 100 ಅಥವಾ ಹೆಚ್ಚು ಪ್ರತಿಗಳನ್ನು ತರಿಸಿಕೊಳ್ಳಬೇಕಾಗಿ ವಿನಂತಿ. ಕೊಟ ಬ್ರಾಹ್ಮಣರಲ್ಲಿ 800 ಪ್ರತಿಗಳನ್ನು ಇತರರಲ್ಲಿ 200 ಪ್ರತಿಗಳನ್ನು ಗ್ರಂಥಕರ್ತನು ಹಂಚುವನು. ಇತರರಿಗೆ ಪ್ರಚಾರಕ್ಕಾಗಿ ಲಾಭವಿಲ್ಲದೆ ಕಳುಹಿಸಲ್ಪಡುವವು.



### ಬ್ರಾಹ್ಮಣ ಸೇವಾ ಪುಸ್ತಕ ಮಾಲೆಯ ಇತರ ಪ್ರಕಟಣೆಗಳು.

1. ದೇವರ ಸ್ತೋತ್ರಗಳು: 2. ನಮ್ಮ ಪುರೋಹಿತರು.
3. ಗಾಯತ್ರೀ ಮಹಾತ್ಮೆ:
4. ಶ್ರೀಮದಾಶ್ವಲಾಯನ ಸಂಧ್ಯೋಪಾಸನೆ.

ಪ್ರಕಾಶಕ

**ಕೋಟ ವಾಸುದೇವ ಕಾರಂತ** ಎಂ.ಎ.,ಎಂ.ಐ.ಇ.

**ನೆಹರು ಎವಿನ್ಯು ಕ್ರೋಸ್ ರೋಡ್**

**ಮಂಗಳೂರು-3.**

ಶಾಂಕಾ ಛಾಪಖಾನೆ ಲಿಮಿಟೆಡ್, ಮಂಗಳೂರು.